# ಶೂದ್ರ

"One particularly telling representation of the fundamental relation between man and freedom is offered in the biblical myth of man's expulsion from paradise."

— Erich Fromm



ಈ ಸಂಚಿಕೆಯಲ್ಲಿ :

ಪೋಲಂಕಿ ರಾಮಮೂರ್ತಿ – ಕೆ.ಎಂ. ಮುನಿಕೃಷ್ಣಪ್ಪ – ಜರಗನಹಳ್ಳಿ ಶಿವಶಂಕರ್ ಜೋಸೆಫ್ ಬ್ರಾಡ್‌ಸ್ಕಿ–ಎಂ.ಎಸ್. ರಘುನಾಥ್–ಚಿನುಆ ಅಚಿಬೆ–ನಾಗಣ್ಣ–ತಾ.ಸಿ. ತಿಮ್ಮಯ್ಯ – ಎ.ಆರ್. ಮಣಿಕಾಂತ್ – ಸುಬ್ಬು ಹೊಲೆಯಾರ್ – ಬಸೂ–ವಿಶೇಷ ಲೇಖನ – ಗೀತಾ ಡಿ. ಸಿ. – ಗವಿಸಿದ್ಧ ಎನ್. ಬಳ್ಳಾರಿ – ಸುಜಾತಾ ಕುಮಟಾ ಎಂ. ಹರಿನಾರಾಯಣ ಆಚಾರ್ಯ–ಕ ವೆಂ. ರಾಜಗೋಪಾಲ – ಡಬ್ಲ್ಯು.ಬಿ. ಏಟ್ಸ್ ಕೆ.ಎನ್. ವಿಜಯಲಕ್ಷ್ಮಿ–ಕನಸಿಗೊಂದು ಕಣ್ಣು–ಪುಸ್ತಕ ವಿಮರ್ಶೆ–ಇತ್ಯಾದಿ

ಬೆಲೆ : 5-00 ರೂ. ದೂರವಾಣಿ : 643337

## ಮುಕ್ತಚರ್ಚೆಗಾಗಿ 'ಶೂದ್ರ' ತಿಂಗಳ ಪತ್ರಿಕೆ

ಸಂಚಿಕೆ : 9 ಮಾರ್ಚ್ 1992 ಸಂಪುಟ : 18

ಸಹಾಯಕ ಸಂಪಾದಕರು : ನಿರ್ಮಲಾ ರೆಡ್ಡಿ – ಉತ್ತನೂರು ರಾಜಮ್ಮ, ವಿ. ಶೆಟ್ಟಿ
ಕೆ. ಎನ್. ಅರುಣ್ – ಸ. ರಘುನಾಥ್
ಜರಗನಹಳ್ಳಿ ಶಿವಶಂಕರ್–ಎಲ್. ಎನ್. ಮುಕುಂದರಾಜ್

ಶೂದ್ರಕ್ಕೆ ಚಂದಾ ಕಳಿಸಿ. ಆಜೀವ ಚಂದಾ ಬಾಬ್ತು ಕಂತುಗಳಲ್ಲಿ ಕೊಡುವವರು ಸ್ವಲ್ಪ ಜಾಗ್ರತೆ ಕೊಟ್ಟರೆ ಒಳಿತು. ಚಂದಾದ ರೀತಿಯಲ್ಲಿ ನಾಲ್ಕೈದು ವರ್ಷ ಕೊಟ್ಟರೆ ನಿಜವಾಗಿಯೂ ತೊಂದರೆಯಾಗುತ್ತದೆ. ಶೂದ್ರ ಬರದಿದ್ದರೆ ಪತ್ರ ಬರೆಯಿರಿ. ಚಂದಾವನ್ನು ಎಂ. ಓ. ಮೂಲಕ ಕಳುಹಿಸುವವರು ದಯವಿಟ್ಟು ಕೌಂಟರ್ ಭಾಗದಲ್ಲಿ ವಿಳಾಸ ಬರೆಯಿರಿ. ಲೇಖನ ಮತ್ತು ಕವನ ಕಳುಹಿಸುವವರು ರಿಪ್ಲೈ ಕಾರ್ಡಿಡಿ. ಚೆಕ್ ಮೂಲಕ ಕಳುಹಿಸುವವರು 10 ರೂ. ಹೆಚ್ಚುವರಿ ತುಂಬಿ.

ಹಿಂದೆ ಶೂದ್ರಕ್ಕೆ 200 ರೂ.ಗಳ ಆಜೀವ ಚಂದಾ ಕೊಟ್ಟಿದ್ದಾರೆ. ಆದರಲ್ಲೂ ಬಹುಪಾಲು ಮಂದಿ ಕಂತುಗಳಲ್ಲಿ. ಈಗ ಆಜೀವ ಚಂದಾ 400/– ರೂ. ಆಗಿದೆ ಕಳೆದ ವರ್ಷದಿಂದ. ತಿಂಗಳ ಪತ್ರಿಕೆಯಾಗಿ ವರ್ಷಕ್ಕೆ 800ಕ್ಕೂ ಹೆಚ್ಚು ಪುಟಗಳನ್ನು ಕೊಡುತ್ತಿದೆ. ಅನ್ಯಥಾ ಭಾವಿಸದೆ ಮಿಕ್ಕ ಹಣವನ್ನು ಕೊಟ್ಟರೆ ಅನುಕೂಲವಾದೀತು. —ಸಂ.

**ನೀವು ಕಳಿಸುವ ಚಂದಾ ಶೂದ್ರದ ಬೆಳವಣಿಗೆಯ ಸಂಕೇತ**

ಮುಖಪುಟದ ಕಲಾವಿದರು : ರೋಡಿಸ್
(ಇದನ್ನು ಮಣಿಪಾಲ್‌ನ ವಿಜಯನಾಥ ಶೆಣೈಯವರ ಕಲಾಗಾರದಿಂದ ತೆಗೆದುಕೊಂಡಿದ್ದು)

ವಾರ್ಷಿಕ ಚಂದಾ : 60-00 ರೂ. ಪುಸ್ತಕ ಭಂಡಾರಗಳಿಗೆ 65-00 ರೂ.
ಆಜೀವ ಚಂದಾ : 400-00 ರೂ. (ನಾಲ್ಕು ಕಂತುಗಳಲ್ಲಿ) 450-00 ರೂ.

ಶೂದ್ರ ಶ್ರೀನಿವಾಸ್, ನಂ. 1, 3 ನೇ ಕ್ರಾಸ್, ಬಾಲಾಜಿನಗರ, ಸುದ್ದುಗುಂಟೆಪಾಳ್ಯ,
ಡಿ. ಆರ್. ಕಾಲೇಜ್ ಅಂಚೆ, ಬೆಂಗಳೂರು-560 029

# ಬಂಡಾಯ ಸಾಹಿತ್ಯ

— ಪೋಲಂಕಿ ರಾಮಮೂರ್ತಿ

ಶೂದ್ರವೂ ದಲಿತವೂ ಆದ ಬಂಡಾಯ ಸಾಹಿತ್ಯ ಬ್ರಾಹ್ಮಣವೂ ಶಿಷ್ಟವೂ ಆಗಿರುವ ಸಾಹಿತ್ಯದ ಮರ್ಜಿಹಿಡಿಯುತ್ತಿರುವುದು, ತನ್ನಲ್ಲಿ ಆತ್ಮವಿಶ್ವಾಸವಿಲ್ಲದ್ದರ ಗುರುತಾಗಿದೆ. ಈಗಾಗಲೇ ಅವರ ಕೆಲವೇ ಕೆಲವು ಕತೆ ಕವನ ಕಾದಂಬರಿಗಳಾದರೂ ವಿಶ್ವ ಸಾಹಿತ್ಯಕ್ಕೆ ಸಲ್ಲುವಂಥದಾಗ್ಯೂ ಬಂಡಾಯ ಸಾಹಿತಿಗಳಿಗಾಗಲೀ ಅದರ ವಿಮರ್ಶಕರಿಗಾಗಲೀ ಅದನ್ನ ಅರಿತುಕೊಳ್ಳುವ ಪರಿಶ್ರಮವಾಗಲೀ ಅದನ್ನ ಅರಿತು ಕೊಡಿಸುವ ಪ್ರಯತ್ನಗಳನ್ನ ಗಮನಿಸುವ ಔದಾರ್ಯವಾಗಲೀ ಅವರಲ್ಲಿ ಸಾಕಷ್ಟು ಇದ್ದಂತಿಲ್ಲ. ಇದರಿಂದಾಗಿ ಅವರು ಬಾರಿ ಬಾರಿಗೂ ಶಿಷ್ಟ ಸಾಹಿತಿಗಳ ಮತ್ತು ಅವರ ವಿಮರ್ಶಕರ ಶಹಬಾಸ್‌ಗಿರಿಗೆ ಹಾತೊರೆಯುತ್ತಾರೆ. ಅವರಾದರೋ, ಚನ್ನವೀರ ಕಣವಿಯವರಂತೆ, ಜಿ.ಎಚ್. ನಾಯಕರಂತೆ, ಪೇಟ್ರನೈಸಿಂಗಾಗಿ, "ಪರವಾಗಿಲ್ಲ, ಆವರ" ಎನ್ನುವ ಧಾಟಿಯಲ್ಲಿ ಅವರ ಬೆನ್ನು ತಟ್ಟುತ್ತಾರೆ: ಅಷ್ಟಕ್ಕೆ ಬಂಡಾಯ ಸಾಹಿತಿ ಪುಳಕಿತನಾಗುತ್ತಾನೆ, ಕೃತಕೃತ್ಯನಾಗುತ್ತಾನೆ.

ಶೂದ್ರವೂ ದಲಿತವೂ ಆಗಿರುವ ಬಂಡಾಯ ಯಾವತ್ತಿಗೂ ಶೂದ್ರವೂ ದಲಿತವೂ ಆದ ಜಾನಪದವನ್ನು ಬಹಳಷ್ಟು ಹೋಲುತ್ತದೆ. ಜಾನಪದ ಸಾಹಿತಿ ಹೇಗೆ ತಾನು ಹಾಡಿದ ಹಾಡನ್ನು, ಹೇಳಿದ ಕತೆಯನ್ನು ಸಹೃದಯನಾಗಿ ವಿಮರ್ಶಕನಾಗಿ ಅರಿಯನೊ ಹಾಗೆಯೇ ನಮ್ಮ ಬಂಡಾಯ ಸಾಹಿತಿಯೂ ತನ್ನ ಬರವಣಿಗೆಯನ್ನು ಅರಿಯದವನಾಗಿದ್ದಾನೆ. ಉದಾಹರಣೆಗೆ: ಕೆರೆಗೆ ಹಾರದ ಜಾನಪದ ಕವಿ ಅದರ ಬಗ್ಗೆ ತೀ.ನಂ.ಶ್ರೀ., ಗಿರಡ್ಡಿ ಗೋವಿಂದರಾಜು, ಸಿದ್ಧರಾಮರು ಬರೆದುದನ್ನ ಖಂಡಿತಾ ಅರಿಯಲಾರ. ಅವನು ತನ್ನ ಜನಾಂಗಿಕ ಪ್ರಜ್ಞೆಯಲ್ಲಿ ಅದನ್ನು ಬರೆದಿದ್ದಾನಾದ್ದರಿಂದ, ಅದು ಅವನಿಗೆ ತನ್ನ ವೈಯಕ್ತಿಕ ಪ್ರಜ್ಞೆಗೆ conscious ಮನಸ್ಸಿಗೆ ಅರ್ಥವಾಗಲಿಕ್ಕಿಲ್ಲ.

---

ಪೋಲಂಕಿ ರಾಮಮೂರ್ತಿ, ಆರ್-6, ಪ್ರೊಫೆಸರ್ಸ್ ಕ್ವಾರ್ಟರ್ಸ್, ಮೈಸೂರು-570 006

ಹಾಗೆಯೇ ಕುಸುಮಬಾಲೆಯನ್ನು ಜಾನಪದದ ನಾನಾ ಧಾಟಿಗಳಲ್ಲಿ ಬರೆದ ದೇವನೂರರಿಗೆ. ತಮ್ಮ ಜನಾಂಗಿಕ ಪ್ರಜ್ಞೆ ತಮ್ಮ ವೈಯಕ್ತಿಕ ಪ್ರಜ್ಞೆಗೆ ನಿಲುಕಲಿಕ್ಕಿಲ್ಲ. ನಿಲುಕಿಲ್ಲ. ಜನಾಂಗಿಕ ಪ್ರಜ್ಞೆಯ ಅಂತರಾಳವನ್ನು ಹೊಕ್ಕ ಯಾವುದೇ ಬರಹಗಾರನಿಗೆ ಅದರ ಸಂಪೂರ್ಣ ಅರಿವು. ಅವನೆಷ್ಟೇ ಪ್ರಜ್ಞಾವಂತನಾದರೂ ಆಗಲಿಕ್ಕಿಲ್ಲ. ಡಿ.ಎಚ್. ಲಾರೆನ್ಸನಂಥ ಮಹಾ ಪ್ರಜ್ಞಾವಂತ ಬರಹಗಾರನಿಗೂ ತನ್ನ ಲೇಡೀಸ್ ಛಾಟರ್ಲೀಸ್ ಲವರ್‌ನಲ್ಲಿನ ಒಂದು ಸಂಕೇತ ಒಬ್ಬ ವಿಮರ್ಶಕ ತೋರಿಸಿಕೊಟ್ಟಾಗಲೇ ಅದು ಅವನ ಗಮನಕ್ಕೆ ಬಂದದ್ದು. ಆದ್ದರಿಂದ ಇದರಲ್ಲಿ ಬಂಡಾಯ ಬರಹಗಾರ ತನ್ನ ವೈಯಕ್ತಿಕ conscious ಮನಸ್ಸಿನ ಸೀಮಿತತೆ ಬಗ್ಗೆ ನಾಚಿಕೆ ಪಟ್ಟುಕೊಳ್ಳಬೇಕಾದ್ದೇನಿಲ್ಲ. ಆದರೆ ತನ್ನ conscious ಮನಸ್ಸೇ ಸರ್ವಜ್ಞನೆಂದು, ಅದಕ್ಕೆ ಅರ್ಥವಾಗದಿದ್ದುದು ತನ್ನ ಜನಾಂಗಿಕ ಪ್ರಜ್ಞೆಯ ಕೃತಿಯಲ್ಲಿ ಯಾವುದೂ ಇರಲಿಕ್ಕೆ ಸಾಧ್ಯವಿಲ್ಲವೆನ್ನುವುದು ಅರಿವಿನ ಲಕ್ಷಣವಲ್ಲ.

ಬಂಡಾಯ ಸಾಹಿತಿ ಮೊದಲು ತಾನು ಕಂಡುಕೊಳ್ಳಬೇಕಾಗಿರುವ ಸತ್ಯ ತಾನು ಕಾಯಾ ವಾಚಾ ಮನಸಾ ಶೂದ್ರನೆಂದೇ. ಅದರಿಂದಾಗಿ ಬಂಡಾಯ ಸಾಹಿತಿಯು ಕಾಯಕ ಶೂದ್ರವಾಗಿದ್ದಂತೆ. ಅವನ ಮನಸ್ಸು ಶೂದ್ರವಾಗಿರುವುದೂ, ಅವನ ವಚನವೂ ಶೂದ್ರವಾಗಿರುವುದು ಸಹಜವಾಗಿದೆ. ಅವು ಹಾಗಿದ್ದಾಗಲೇ ಅವನ ಬಂಡಾಯ ಸಾಹಿತ್ಯ ಖರೆ ಆಗುತ್ತದೆ, ಅಸಲಿ ಆಗುತ್ತದೆ, ನಕಲಿ ಆಗುವುದಿಲ್ಲ.

ಶೂದ್ರವೆನ್ನುವುದು ನಿಂತಿರುವುದೇ ಕಾಯಕದ ಮೇಲೆಯಾದ್ದರಿಂದ, ಕಾಯಕದವರೆಲ್ಲರೂ, ಅಂದರೆ ದುಡಿದು ಬೆವರುವವರೆಲ್ಲರೂ, ಗಂಡು ಹೆಣ್ಣು ಎನ್ನದೆ, ಮೇಲು ಕೀಳೆನ್ನದೆ ಒಂದಾಗುವವರು, ಒಬ್ಬರಿಗೊಬ್ಬರು ಸಮರು. ಅದಕ್ಕೇ ಅವರಲ್ಲಿ ಜಾತಿಭೇದದ ಮೇಲು ಕೀಳೆಂಬ ಏಕ ಬಹುವಚನಗಳ ಭೇದಗಳಿಲ್ಲ. ಕಾಯಕದವನು ದೇವರನ್ನೂ, ಧಣಿಯನ್ನೂ, ತನ್ನ ತಂದೆ ತಾಯಿಗಳನ್ನೂ, ಅಣ್ಣ ಅಕ್ಕರನ್ನೂ, ಕಾಯಕದ ಹೆಣ್ಣು ಗಂಡನನ್ನೂ ಏಕವಚನದಲ್ಲೇ "ನೀನು" ಎಂತಲೇ ಕರೆಯುತ್ತಾರೆ. ಕಾಯಕದ ಹೆಣ್ಣು ಗಂಡನೊಂದಿಗೆ ದುಡಿಯುವವಳೂ, ಹಣ ಗಳಿಸುವವಳೂ, ಆರ್ಥಿಕ ಸಮಾನಳೂ ಆದ್ದರಿಂದ ಅವಳು ಗಂಡನನ್ನು ಬಹುವಚನದಲ್ಲಿ ಕರೆಯುವುದಿಲ್ಲ. ಗಂಡ ಸತ್ತರೆ ಸೀರೆ ಉಡುಕಿ ಮಾಡಿಕೊಂಡು ಮತ್ತೊಂದು ಗಂಡಿನೊಂದಿಗೆ ಸಂಸಾರ ಮಾಡಬಲ್ಲ ಗಂಡಿನ ಸರಿಸಮಾನಳೂ ಹೌದು. ಆದ್ದರಿಂದ ಕಾಯಕದ ಶೂದ್ರರಲ್ಲಿ ಜಾತೀಯತೆ, ಮೇಲು ಕೀಳು ಉಪಚಾರಕ್ಕಷ್ಟೇ ಇದ್ದರೆಯಾಗಲಿ, ಆಚಾರದಲ್ಲಿಲ್ಲ. ದಲಿತನನ್ನ ಒಕ್ಕಲು ಮನೆತನದವರು, "ಮನೆ ಮಗ" ಎಂತಲೇ ಕರೆಯುತ್ತಾರೆ, ಅವನನ್ನ ಮನೆಯ ಮಗನಂತೆಯೂ ಕಾಣುತ್ತಾರೆ.

ಕಾಯಕದಂತೆ ಮನಸ್ಸು ಮೇಲು ಕೀಳೆಂಬ ಭಾವನೆಯಿಲ್ಲದೆ, ಸಮತೆಯುಳ್ಳದ್ದಾಗಿದೆ. ಅದರಂತೆ, ನಡೆಯಂತೆ, ನಡೆಗೆ ತಕ್ಕ ಮನದಂತೆ, ವಾಚವೂ, ನುಡಿಯೂ ಸಮತೆಯದೇ, ಒಂದಾಗುವ ಒಲವಿನದೇ ಆಗಿದೆ.

ಆದರೆ ಬ್ರಾಹ್ಮಣರು ಕಾಯಕದ ವಿರೋಧಿಗಳಾದ್ದರಿಂದ, ಕಾಯಕದ ಬೆವರು ಳವರು, ಅವರಿಗೆ ಮಲಿನವಾದ ಅಸ್ಪೃಶ್ಯರಾದ್ದರಿಂದ, ಕೀಳಾದವರಿಂದ ಅವರು ಇತರರನ್ನು ಮುಟ್ಟಿ ಒಂದಾಗುವವರಲ್ಲ, ಏಕ ಬಹುವಚನಗಳ ಭೇದ ಬಿಡುವವರಲ್ಲ. ಹೆಣ್ಣು ಬ್ರಾಹ್ಮಣಳಾಗಿದ್ದರೂ ಅವಳನ್ನು ಶೂದ್ರತೆಯ ಅಸ್ಪೃಶ್ಯತೆಯಿಂದ ಬಿಡುಗಡೆ ಮಾಡುವವರಲ್ಲ. ಆದ್ದರಿಂದ ಅವರ ಸಂಸ್ಕೃತ ಭಾಷೆ ಜಾತಿಯ ಮೇಲು ಕೀಳಿನ, ಏಕ ಬಹುವಚನಗಳ, ಪ್ರತ್ಯಯ ಭೇದಗಳ ಅಸಮತೆಯ, ಅಸ್ಪೃಶ್ಯತೆಯ ಭಾಷೆಯಾಗಿದೆ. ಅದಕ್ಕೆ ಶೂದ್ರ ಭಾಷೆಯೆನ್ನುವುದ "ಅರಿ" ಅಂದರೆ "ಶತ್ರು"ವಾಗಿದೆ- ಆದ್ದರಿಂದ ಅದು ಸಂಸ್ಕೃತ ಮತ್ತು ಶೂದ್ರ ಭಾಷೆಯ ಜೋಡಣೆಯನ್ನು "ಅರಿಸಮಾಸ" ವೆಂದು, ದ್ವೇಷ ಕಾರುತ್ತದೆ.

ಸಂಸ್ಕೃತ ಭಾಷೆ ಜನ ಜೀವನದೊಂದಿಗೆ ಬೆರೆಯುವ ಜಾನಪದ ಭಾಷೆಯಲ್ಲ; ಅದು ಜನರಿಂದ ಬೇರೆಯಾದ, ಜನರ ನಗರವನ್ನು ಅಗಲಿದ ದೇವರ ನಗರವನ್ನು ಸೇರಿದ, ದೇವನಾಗರೀಕೃತಕ ಭಾಷೆ. ಸಂಸ್ಕೃತವೆಂದರೆ ಸಂ-ಚೆನ್ನಾಗಿ, ಕೃತ-ಮಾಡಲ್ಪಟ್ಟ ಚೆನ್ನಾಗಿ ಮಾಡಲ್ಪಟ್ಟ ಕೃತಕ ಭಾಷೆ. ಆಡುಮಾತಿನಲ್ಲಿ ಹುಟ್ಟಿ ಬೆಳೆದ ಸಹಜ ಜಾನಪದ ಭಾಷೆಯಲ್ಲ. ಅದಕ್ಕೇ ಸಂಸ್ಕೃತ ದೇವನಾಗರೀಕ ಭಾಷೆ ಮೊನಚಾದ ಉದ್ದಗಲ ಗೀಟುಗಳ, ಚೂಪಾದ ಅಂಚುಗಳ, ಕೋನಗಳ, ಕೃತಕ ಭಾಷೆ. ಆದರೆ ಆಡುಮಾತಿನ ಜಾನಪದ ಭಾಷೆ ಪ್ರಕೃತಿಯಂತೆ, ಭೂಮಿ, ಸೂರ್ಯ, ಚಂದ್ರರಂತೆ, ಗುಂಡು ಬೆಟ್ಟಗಳಂತೆ, ಭ್ರೂಣದಂತೆ, ಮೊಟ್ಟೆಯಂತೆ, ಹಣ್ಣಿನಂತೆ, ಬ್ರಹ್ಮಾಂಡವೆನ್ನುವ ಇಡಿಯ ನಿಸರ್ಗದ ಪ್ರತಿಯೊಂದು ಪಿಂಡಾಕೃತಿಯ ಸೃಷ್ಟಿ ವಿಶೇಷದಂತೆ ದುಂಡಗೆ ಇರುವ ಓರೆಕೋರೆ, ಚೂಪು ಮೊನಚುಗಳಿಲ್ಲದ ದುಂಡು ದುಂಡು ಅಕ್ಷರಗಳ ದುಂಡಾದ ದ್ರಾವಿಡ ಭಾಷೆ-ಸಹಜ ಪ್ರಾಕೃತ ಭಾಷೆ.

ಸಂಸ್ಕೃತ ಭಾಷೆಯನ್ನು ಆಡಿದ ಕ್ಷಣದಲ್ಲಿ ಜಾತೀಯತೆ, ಮೇಲು ಕೀಳು, ಅಸ್ಪೃಶ್ಯತೆ, ಅಸಮತೆ, ಅರಿತನಗಳ ಪಿಡುಗೇ ಹುಟ್ಟಿಕೊಳ್ಳುತ್ತದೆ – ಅದಕ್ಕೇ ಜಾತೀಯತೆಯನ್ನು ಮೊಟ್ಟಮೊದಲ ಬಾರಿಗೆ ಬೇರುಸಹಿತ ಕಿತ್ತುಹಾಕಿ, ಸಮತೆ, ಮೈತ್ರ (ಮಿತ್ರ) ಭಾವಗಳನ್ನು ಬಿತ್ತುವ ಪ್ರಾಕೃತ, ಅಂದರೆ ಪ್ರಕೃತಿಯ, ನೇಚರಿನ, ಭಾಷೆಯಾದ ಪಾಳಿಯಲ್ಲಿ, ಬುದ್ಧನು ಮಾತನಾಡುತ್ತಾ, ತನ್ನ ಬೋಧೆ ಎಂದಿಗೂ ಸಂಸ್ಕೃತಕ್ಕೆ ಅನುವಾದಿಸಕೂಡದು, ಅದು ಪಾಳಿ ಭಾಷೆಯಲ್ಲೇ ಇರಬೇಕೆಂದು ಆದೇಶ ನೀಡಿ ಕಾಲವಾದ. ಆದರೆ ಕ್ರಮೇಣ ಪಾಳಿ ಭಾಷೆಯ ಬೌದ್ಧ ಧರ್ಮ ಸಂಸ್ಕೃತಕ್ಕಿಳಿದು

ವಾತಾಪಿ ಜೀರ್ಣೋಭವವಾಯಿತು – ಬೌದ್ಧಧರ್ಮ ಭಾರತದಲ್ಲಿ ಸತ್ತಿತು, ಆದರೆ ಭಾರತದಿಂದ ಗಡೀಪಾರಾದ ಪಾಳೀ ಭಾಷೆಯು ಬೌದ್ಧಧರ್ಮ ಚೀಣಾ, ಜಪಾನ್, ಜಾವಾ, ಸುಮಾತ್ರಾ ಇತ್ಯಾದಿ ದೇಶಗಳಲ್ಲಿ ಸಹಜವಾಗಿ ಬೆಳೆದು ಈಗ ಅದು ಜಗತ್ತಿನ ಮೂರನೇ ಒಂದು ಜನಸಂಖ್ಯೆಗೆ ಸಾಂತ್ವನ ನೀಡುತ್ತಾ, ಪೋಷಿಸಿ ಬೆಳೆಸುತ್ತಾ ಬಂದಿದೆ.

ಬುದ್ಧನ ನಂತರ ಬುದ್ಧನ ಹಾಗೆಯೇ ವೇದ ಮತ್ತು ಜಾತಿಯ ಜನ್ಮ ಜಾಲಾಡಿದ ಬಸವ ಮಹಾನುಭಾವ, ಸಂಸ್ಕೃತದ ಪಿಡುಗನ್ನು ಬಿಟ್ಟು, ಆಡುಮಾತಿನ, ಇಂದಿಗೂ ಜೀವಂತವಾಗಿರುವ, ವಚನದಲ್ಲಿ ಬಂಡಾಯದ ಕ್ರಾಂತಿ ಮಾಡಿದ.

ಆದರೆ ಆತ್ಮವಿಶ್ವಾಸ ಗಳಿಸಿಕೊಳ್ಳದ ನಮ್ಮ ಬಂಡಾಯ ಸಾಹಿತ್ಯದ ಮುಖಂಡರುಗಳು ಬುದ್ಧ ಬಸವರ ಕ್ರಾಂತಿಕಾರೀ ಹಿತವಚನಕ್ಕೆ ಕಿವಿಗೊಡದೆ, ಸಂಸ್ಕೃತದ ಕರ್ಕಶತೆಗೆ ("ಕರ್ಕಶ"ವೆನ್ನುವ ಸಂಸ್ಕೃತ ಪದವೇ ಅದರ ಶಬ್ದದಲ್ಲಿ ಅದರ ಗುಣವನ್ನು ಸಾಬೀತುಪಡಿಸುತ್ತದೆ) ಜೋತು ಬೀಳುತ್ತಿರುವುದು ಅತ್ಯಂತ ವಿಷಾದವಾದ ಸಂಗತಿ.

ಧಾರವಾಡದಲ್ಲೊಮ್ಮೆ ಚಂಪಾರವರು "ಸಂಕ್ರಮಣ ವೇದಿಕೆ" ಮಾಡುತ್ತೇವೆಂದು ನನ್ನನ್ನು ಆ ಬಗ್ಗೆ ಸಭೆಯನ್ನುದ್ದೇಶಿಸಿ ಮಾತನಾಡಲು ಕೇಳಿದಾಗ (ಆ ಸಭೆಯಲ್ಲಿ ಚನ್ನವೀರ ಕಣವಿಯವರೂ ಇದ್ದರು) ನಾನು ಸಭೆಯನ್ನುದ್ದೇಶಿಸಿ "ಯಾವ ವೇದ ನಮ್ಮನ್ನು ಶತಶತಮಾನಗಳಿಂದ ಕೊಂದು ಕೂಗುತ್ತಾ ಬಂದಿದೆಯೋ, ಯಾವ ಬುದ್ಧ ಬಸವರು ಅದನ್ನು ಉಚ್ಚಾಟನೆ ಮಾಡಿ ತಮ್ಮ ಮಾನವೀಯ ಧರ್ಮವನ್ನು ನಮ್ಮಲ್ಲಿ ಬಿತ್ತುತ್ತಾ ಬಂದರೋ, ಅಂಥಾ ವೇದವನ್ನು ಬಂಡಾಯದವರಾದ ನಾವು ಮತ್ತೆ "ವೇದಿಕೆ" ಎನ್ನುವ ಮಾತುಗಳಲ್ಲಿ ಪೂಜೆ ಮಾಡುತ್ತಾ ಚಿರಂಜೀವಿ ಗೊಳಿಸುತ್ತಿದ್ದೇವಲ್ಲಾ, ನಮಗೆ "ಸಂಕ್ರಮಣ ರಂಗ, ಕೂಟ, ಬಳಗ" ಇತ್ಯಾದಿ ಪದಗಳಿಲ್ಲವೇ ಎಂದಾಗ, ಚಂಪಾರವರೇ "ಸಂಕ್ರಮಣ ಚಾವಡಿ" ಎನ್ನುವ ಮಾತು ಸರಿಯಾಗಿರುವಂತೆ ಕಾಣುತ್ತದೆ ಎಂದು, ಆ ಚಾವಡಿ, ಚಾ ಮತ್ತು ವಡಿಯ ಕೂಟವಾಗಬಾರದೆಂದು ಹಾಸ್ಯ ನುಡಿದರು. ಈಗ ಸಂಕ್ರಮಣ ವೇದಿಕೆಯಾಗಿದೆಯೋ, ಚಾವಡಿಯಾಗಿದೆಯೋ ಗೊತ್ತಿಲ್ಲವಾದರೂ, ಚಂಪಾರು ಮಾತ್ರ "ವೇದಿಕೆಯನ್ನು ಇನ್ನೂ ಗಟ್ಟಿಯಾಗಿ ತಬ್ಬಿಕೊಂಡಿದ್ದಾರೆ. ಅವರ ಮುಖಂಡತ್ವದಲ್ಲಿ ನಡೆದ ಬಂಡಾಯ ಸಾಹಿತ್ಯ ಸಮ್ಮೇಳನಗಳಲ್ಲಿನ ಆಹ್ವಾನ ಪತ್ರಿಕೆಗಳಲ್ಲಿ "ಉದ್ಘಾಟನೆ", "ಗೋಷ್ಠಿ", "ಸಮಾರೋಪ" ಇತ್ಯಾದಿಗಳ ಕಿಕ್ಕಿರಿತ ಶಿಷ್ಟ ಸಾಹಿತಿಗಳನ್ನು ನಾಚಿಸುವಷ್ಟರಮಟ್ಟಿಗಿದೆ. ಅದಕ್ಕೆ ತಕ್ಕಂತೆ ಅಲ್ಲಿನ ಭಾಷಣಕಾರರು, ಮುಖ್ಯವಾಗಿ ಚಂಪಾರವರು, "ಸಂವಹನ" ಎನ್ನುವ ಅವರೂ ಸೇರಿದಂತೆ ಅಲ್ಲಿದ್ದವರ್‍ಯಾರಿಗೂ ಗೊತ್ತಿಲ್ಲದ, ಗೊತ್ತಾಗದ, ಸಂಸ್ಕೃತ ಗೀರ್ವಾಣವನ್ನು ಪಠಿಸುತ್ತಿದ್ದಾರೆ. ಮೊನ್ನಿನ ಬಂಡಾಯ ಸಾಹಿತ್ಯದ "ಉದ್ಘಾಟನೆ" ಎನ್ನುವುದನ್ನು ಮಾಡಿದ ನಮ್ಮ ಶಿಷ್ಟ ಸಾಹಿತ್ಯದಲ್ಲಿ ಕೀಟ್ಸ್‌ನಂಥಾ ನವಿರು ಭಾವಗಳ

ಶ್ರೇಷ್ಠ ಕವಿ ಕಣವಿಯವರೂ "ಸಂವಹನ"ದ ಬಗ್ಗೆ ಮಾತನಾಡಿದರು, ಅದನ್ನು ಪತ್ರಿಕೆಗಳು ಬಿಡದೆ ವರದಿ ಮಾಡಿವೆ.

ಸಂವಹನವೆಂದರೆ, "ವಹ" ಎನ್ನುವ "ಹೊತ್ತುಕೊಳ್ಳು"ವ ಅರ್ಥದ ಪದ ಸೂಚಿಸುವಂತೆ, "ಸರಿಯಾಗಿ ಹೊರುವುದು" ಎಂದರ್ಥ. ಅಂದರೆ ಬಂಡಾಯ ಸಾಹಿತಿಗಳ ಕೆಲವರ ಬರವಣಿಗೆ "ಸಂವಹನ"ವಾಗುತ್ತಿಲ್ಲವೆಂದರೆ ಅದು ಸರಿಯಾಗಿ ಅರ್ಥವಾಗುತ್ತಿಲ್ಲ, ಅವರು ಹೇಳಬೇಕೆನ್ನುವುದನ್ನು ಅವರು ಅವರ ಭಾಷೆಯಲ್ಲಿ ಮುಟ್ಟಿಸುತ್ತಿಲ್ಲ ಎಂದರ್ಥವಿರಬಹುದೇ ? "ಸಂವಹನ"ವೆಂದರೆ carry ಮಾಡುವುದೇ, convey ಮಾಡುವುದೇ, communicate ಮಾಡುವುದೇ, mediate ಮಾಡುವುದೇ, mean ಮಾಡುವುದೇ, ಈ ಇಂಗ್ಲೀಷಿನ ಪದಗಳು ಅಲ್ಲಿ ನೆರೆದಿದ್ದ 100 ಜನಕ್ಕೆ 70, 80 ಜನಕ್ಕಾದರೂ ಖಂಡಿತಾ ಅರ್ಥವಾಗುವ ಪದಗಳು. ಆದರೆ "ಸಂವಹನ"ವೆನ್ನುವುದೂ 100ಕ್ಕೆ 5 ಜನರಿಗಾದರೂ ಅರ್ಥವಾಗಿರಬಹುದೇ ?

ಬಂಡಾಯ ಸಾಹಿತಿಗೆ ಮುಂಗುಷ್ಯಾದ ಕೀಳರಿಮೆ ಇದ್ದಾಗ ಅವನು ಈ ತನಗರ್ಥವಾಗಿಲ್ಲದ ಇತರರಿಗರ್ಥವಾಗದ ಸಂಸ್ಕೃತ ಪದಗಳನ್ನು ಉದುರಿಸುತ್ತಾನೆ: ಇದೊಂದು names dropping ತರಹೆಯ sanskrit dropping, (ಅಥವಾ droppings, ಸಂಸ್ಕೃತದ ಹಿಕ್ಕೆ ಹಾಕುವುದು) "ಇಕ್ರ್ಲಾ, ಒಡಿರ್ಲಾ. ಈ ನನ್ನ ಸೂಳೇ ಮಕ್ಳ ಮೂಳೇ ಎಬ್ರ್ಲಾ" ಅನ್ನೋ ಬಂಡಾಯ ಸಾಹಿತಿಗೆ "ಸಂವಹನ" ಎಂದರೆ ನಮಗೇನಾದರೂ ಮಂತಿ ಅನ್ನೋದು ಇದೆಯೇ ?

ಚಂಪಾರವರಿಗೆ ಕುಸುಮಬಾಲೆಯ ಭಾಷೆ ಅರ್ಥವಾಗಿಲ್ಲ, ಹೇಗೆ ಮೈಸೂರಿನವರಿಗೆ ಧಾರವಾಡದ ಹಳ್ಳಿ ಮಾತು ಅರ್ಥವಾಗುವುದಿಲ್ಲವೋ, ಹಾಗೆ ಅಷ್ಟೆ. ಆದರೆ ಚಂಪಾ ಹಾಗೆಂದರೆ ಬಂಡಾಯ ಸಾಹಿತಿ ಎನಿಸಿಕೊಂಡ ಅದರ ಮುಖಂಡರಾಗಿರುವವರಿಗೆ ಅವಮಾನವಲ್ಲವೇ ? ಅದಕ್ಕೇ ಅವರು "ಸಂವಹನ" ಆಗಿಲ್ಲವೆಂದರೆ, ಅವರಿಗೂ ಗೊತ್ತಿಲ್ಲ, ನಮಗೂ ಗೊತ್ತಿಲ್ಲವೆಂದರೆ ನಮಗಲ್ಲಿ ಜನ ಸಂಸ್ಕೃತ ಗೊತ್ತಿಲ್ಲದ ಅನಾರ್ಯರೆನ್ನುತ್ತಾರೋ ಎಂದು ನಾವೂ ಉಗುಳು ನುಂಗಿ ಸುಮ್ಮನಾಗಿ ಬಿಡುತ್ತೇವೆ.

ಉದಾಹರಣೆಗೆ ಕುಸುಮಬಾಲೆಯಲ್ಲಿ ಹೊಲೆಯರ ಅಮಾಸ ಮಾಧ್ವರ ಹೆಣ್ಣನ್ನು ಕೂಡುವಲ್ಲಿ "ಶುಕ್ರ"ವೆನ್ನುವ ಪದದ ಧ್ವನಿ ವಿಶೇಷಗಳನ್ನು ಕುರಿತು ಬರೆದಿದ್ದೆ. ಈ ಧ್ವನಿ ವಿಶೇಷತೆಯ ಪರಿಶ್ರಮ ಇಂಗ್ಲೀಷ್ ಸಾಹಿತ್ಯದಲ್ಲಿ ಅತ್ಯಂತ ಗಂಭೀರವಾದ ವಿಮರ್ಶೆಯ ವಿಧಾನವಾಗಿದೆ. ನನ್ನ "ಶುಕ್ರ" ಪದದ ಧ್ವನಿ ವಿಶೇಷಗಳನ್ನು ನಾನು ಷೇಕ್ಸ್‌ಪಿಯರ್‌ನ 129ನೇ ಸಾನೆಟ್ಟಿನ "spirit" ಎನ್ನುವ ಪದದ ಧ್ವನಿ ವಿಶೇಷಗಳ ಬಗ್ಗೆ ಹೋಲಿಸಿದ್ದೆ, ಯಾಕೆಂದರೆ ವಿಮರ್ಶೆಯಲ್ಲಿ ಒಂದು ಭಾಷೆಯ ಸಾಹಿತ್ಯ ಸನ್ನಿವೇಶವನ್ನು ಇನ್ನೊಂದು ಭಾಷೆಯ ಸಾಹಿತ್ಯ ಸನ್ನಿವೇಶಕ್ಕೆ ಹೋಲಿಸು

ವಾಗ ನಾವು ವಿಶ್ವ ಸಾಹಿತ್ಯದ ಒರೆಗಲ್ಲ ಮೇಲೆ ಅದರ ತಾಳೆ ನೋಡುತ್ತೇವೆ: ಇದಕ್ಕೇ (comparison and analysis are the chief tools of criticism) ಎನ್ನುವ ಮಾತನ್ನು ಎಲಿಯಟ್ ಕವಿ ಸೂಕ್ತವಾಗಿಯೇ ಹೇಳಿದ್ದಾನೆ.

ದೇವನೂರರ ಕುಸುಮಬಾಲೆಯು ಆ ಲೈಂಗಿಕ ಸನ್ನಿವೇಶ ಷೇಕ್ಸ್‌ಪಿಯರಿನ 129ನೇ ಸಾನೆಟ್ಟಿನ ಲೈಂಗಿಕ ಸನ್ನಿವೇಶಕ್ಕೆ ಎಷ್ಟು ಸರಿಯಾದ ಹೋಲಿಕೆಯಾಗಿದೆ ಎಂದರೆ, ಅದು ನಿಜಕ್ಕೂ ಧ್ವನಿಯ ವಿಶೇಷತೆಯಲ್ಲಿ, ಅನುಭವದ ಸಂಕೀರ್ಣತೆಯಲ್ಲಿ, ಷೇಕ್ಸ್‌ಪಿಯರಿನ ಮಟ್ಟಕ್ಕೆ ಸರಿಸಮಾನದ್ದು. ಈ ಮಾತನ್ನು ನಾನೊಬ್ಬ ಷೇಕ್ಸ್‌ಪಿಯರಿನ ವಿಮರ್ಶಕನಾಗಿ ಮಾತನಾಡುತ್ತಿದ್ದೇನೆ, ಯಾಕೆಂದರೆ ನನ್ನ ಮ್ಯಾಕ್‌ಬೆತ್ ಮೇಲಿನ ಲೇಖನ ಆಕ್ಸ್‌ಫರ್ಡ್‌ನ Essays in Criticism (Spring 1973–' Fear in Macbeth' )ನಲ್ಲಿ ಅಚ್ಚಾಗಿ, ಅದರ ಅಂತರರಾಷ್ಟ್ರೀಯ ಮಟ್ಟದ ವಿಮರ್ಶೆಗಾಗಿ, ಅದು ನನಗೆ ನನ್ನ ಪ್ರೊಫೆಸರ್ ಹುದ್ದೆಯನ್ನು ದೊರಕಿಸಿಕೊಟ್ಟಿರುವ ದಾಖಲೆ ನನ್ನಲ್ಲಿದೆ–ಇದನ್ನು ನಾನು ನನ್ನ ಅರ್ಹತಾ ಪತ್ರವೆಂದಷ್ಟೇ ಓದುಗರ ಗಮನಕ್ಕೆ ನಾನು ತರಬೇಕಾಯಿತೇಕೆಂದರೆ ಜಂಪಣ್ಣನವರು ನನ್ನ ಈ ತಿಳಿವಳಿಕೆಯನ್ನು ಹೀಗೆ ಗೇಲಿ ಮಾಡಿದ್ದಾರೆ: "ಶೇಕ್ಸ್‌ಪಿಯರ್ ಸಾನೆಟ್ಟಿನ spirit ಎಂಬ ಪದಕ್ಕೆ ನಾಲ್ಕು, ಅಂದರೆ ಕೇವಲ ನಾಲ್ಕು, ಅರ್ಥಗಳನ್ನು ಪಟ್ಟಿ ಮಾಡಿಕೊಂಡು ಪೋಲಂಕಿ ಆ ಸಾನೆಟ್ಟನ್ನು ಶೇಕ್ಸ್‌ಪಿಯರನೂ ಗಜವು ನಿಲ್ಲುವಂತೆ ತಿರುವಾಡಿದ್ದಾರೆ. ಅದೇ spirit ಎನ್ನುವ ಪದಕ್ಕೆ 'ಹೆಂಡ' ಎಂಬ ಅರ್ಥವೂ ಇದೆ. ಇಂಡಿಯಾದಲ್ಲಿ ಈ 'ಹೆಂಡ'ಕ್ಕೆ ಪರಮಾತ್ಮ ಎಂಬ ಅಡ್ಡಹೆಸರೂ ಇದೆ. ಇಲ್ಲಿ ಪೋಲಂಕಿಯವರ ಬರಲಿಗೆ (ಪೊರಕಗೆ) ಕಂಕಿಯ ಕೆಳಗಿನ ಈ ಕಾಳು ಯಾಕೆ ಹತ್ತಲಿಲ್ಲವೋ ಅದೇ ಆಶ್ಚರ್ಯ ನನಗೆ. ಬಹುಶಃ ಮುಂದಿನ ಅರ್ಥೈಸುವಿಕೆಯಲ್ಲಿ ಅವರು ಈ ಅರ್ಥಗಳನ್ನೂ ಅಳವಡಿಸುವ ಸಂಭವವಿದೆ. ಎಲ್ಲೈ, ಶೇಕ್ಸ್‌ಪಿಯರನೇ, ಹುಷಾರ್!"

ಬಂಡಾಯ ಸಾಹಿತ್ಯಕ್ಕೆ ಅತ್ಯಂತ ಪ್ರಸ್ತುತವಾದ ಈ ಅರ್ಥದ ಬಗ್ಗೆ ಈ ಮಾತನ್ನು ಸಂಕ್ಷಿಪ್ತವಾಗಿ ನಾನು ಬರೆಯಲೇಬೇಕಾಗಿದೆ. ಷೇಕ್ಸ್‌ಪಿಯರಿನ ಸಾನೆಟ್ಟಿನ spirit ಶಬ್ದಕ್ಕೆ ಕೊಟ್ಟಿರುವ ನಾಲ್ಕು ಅರ್ಥಗಳು ನನ್ನವಲ್ಲ. ಷೇಕ್ಸ್‌ಪಿಯರಿನ ಸಾನೆಟ್ಟುಗಳನ್ನು ಸಂಪಾದಿಸಿದ ಯಾವುದೇ ಪುಸ್ತಕದಲ್ಲಿ ಆ ನಾಲ್ಕು ಅರ್ಥಗಳು, ಕೆಲವಲ್ಲಿ ಇನ್ನೂ ಹೆಚ್ಚಿನ ಧ್ವನಿ ವಿಶೇಷದ ಅರ್ಥಗಳ ಪಟ್ಟಿ ಇದೆ. ಎಂ.ಎ. ಓದುವ ಯಾವನೇ ಇಂಗ್ಲೀಷ್ ವಿದ್ಯಾರ್ಥಿ ಈ ಸಾನೆಟ್ಟುಗಳನ್ನು, ಕನಿಷ್ಠ ಅತ್ಯಂತ ಪ್ರಸಿದ್ಧವಾದ ಈ 129ನೇ ಸಾನೆಟ್ಟನ್ನು ಓದಿರಬೇಕಾಗುತ್ತದೆ. ಅದರಲ್ಲೂ ಇಂಗ್ಲೀಷ್ ಅಧ್ಯಾಪಕನಂತೂ ಎಂ.ಎ. ಮಟ್ಟದ ವಿದ್ಯಾರ್ಥಿಗಳಿಗಾದರೂ, ಈ ಸಾನೆಟ್ಟಿನ spirit ಪದದ ಕನಿಷ್ಠ ನಾಲ್ಕು ಅರ್ಥಗಳ ಪಾಠ ಮಾಡಲೇಬೇಕಾಗುತ್ತದೆ. ಒಂದುವೇಳೆ ಅದು ಅವನ

ಗಮನಕ್ಕೆ ಬರದೇ ಇದ್ದರೂ, ಆ spirit ಪದದ ಅರ್ಥಗಳನ್ನು ಯಾವನಾದರೂ ವಿಶ್ಲೇಷಿಸಿ ವಿಮರ್ಶಿಸಿದಾಗ ಅದನ್ನು ಗ್ರಹಿಸುವಷ್ಟರ ಮಟ್ಟಿನ ಪ್ರಾಥಮಿಕ ಸಂವೇದನೆಯನ್ನಾದರೂ ಕನಿಷ್ಟವಾಗಿ ಉಳ್ಳವನಾಗಿರಬೇಕಾಗಿರುತ್ತದೆ. ಚಂಪಾರವರು ಆ ಷೇಕ್ಸ್‌ಪಿಯರಿನ ಸಾನೆಟ್ಟು ಓದದೆ ಪಾಸ್ ಮಾಡಿದ್ದಾರೆ. ಇಂಗ್ಲೀಷ್ ಪ್ರೊಫೆಸರೂ ಆಗಿದ್ದಾರೆ. ಅದರ spirit ಅರ್ಥದ ಬಗ್ಗೆ ವಿಮರ್ಶೆ ಮಾಡಿದಾಗ ಅದಕ್ಕೆ ಸಂವೇದಿಸುವ ಕನಿಷ್ಟ ಸಹೃದಯತೆಯೂ ಇಲ್ಲದವರಾಗಿದ್ದಾರೆ. ಅವರಿಗೆ spirit ಅನ್ನುವ ಪದದ ಅರ್ಥವೂ, ಅವರು ಭಾಷಾ ಶಾಸ್ತ್ರದಲ್ಲಿ ಇಂಗ್ಲೆಂಡಿನ ಪದವಿ ಪಡೆದವರಾದ ಭಾಷಾ ಶಾಸ್ತ್ರಜ್ಞರಾಗಿದ್ದೂ, ಗೊತ್ತಿಲ್ಲ. ಅವರು 'spirit ಎಂಬ ಪದಕ್ಕೆ ಹೆಂಡವನ್ನುವ ಅರ್ಥವೂ ಇದೆ ಇಂಡಿಯಾದಲ್ಲಿ" ಎಂದಿದ್ದಾರೆ. spirit ಅಂದರೆ ಹೆಂಡವೂ ಹೌದು, ಇಂಗ್ಲೀಷಿನಲ್ಲೀ : ಚಂಪಾ ಯಾವುದೇ ಇಂಗ್ಲೀಷ್ ಡಿಕ್ಷನರಿ ತೆಗೆದು ನೋಡಿದರೂ ಅದರಲ್ಲಿ liquor, alcoholic drink ಅಂದರೆ "ಹೆಂಡ" ಎನ್ನುವ ಅರ್ಥ ಸಿಗುತ್ತದೆ.

ಇಂಥಾ ಚಂಪಾರಂಥಾ ಒಬ್ಬ ಇಂಗ್ಲೀಷ್ ಸಾಹಿತ್ಯವನ್ನು ಬೋಧಿಸುತ್ತಿರುವ ಪ್ರಾಧ್ಯಾಪಕನಿಗೆ ಪ್ರಾಥಮಿಕವಾಗಿ ಇಂಗ್ಲೀಷ್ ಭಾಷೆಯೇ ಗೊತ್ತಿಲ್ಲದಾಗ, ಗೊತ್ತಿಲ್ಲದ್ದನ್ನು ಹೇಳಿದಾಗಲೂ ಗೊತ್ತಾಗದಿದ್ದಾಗ, ಷೇಕ್ಸ್‌ಪಿಯರಿನಲ್ಲಿನ ಒಂದು ಪದದ ಧ್ವನಿ ವಿಶೇಷದ ನಾನಾರ್ಥಗಳೂ ಗೊತ್ತಿಲ್ಲದಾಗ, ಗೊತ್ತುಮಾಡಿಸಿದರೂ ಗೊತ್ತಾಗದಿದ್ದಾಗ, ಭಾಷಾ ಶಾಸ್ತ್ರದಲ್ಲಿ ಪದಗಳ ಉಚ್ಚಾರಣೆ phonetics ಅನ್ನು ಕಲಿತು ಅದನ್ನು ಬೋಧಿಸುತ್ತಿರುವವನಿಗೆ, Shakespeare ಎನ್ನುವ ಪದದ ಉಚ್ಚಾರಣೆ ಷೇಕ್ಸ್‌ಪಿಯರ್, ಶೇಕ್ಸ್‌ಪಿಯರಲ್ಲ. ಇಂಗ್ಲೀಷಿನಲ್ಲಿ "ಶ"ಕಾರವಿಲ್ಲ ಎನ್ನುವುದೂ ಗೊತ್ತಿಲ್ಲದಾಗ, ಅದನ್ನು ಗೊತ್ತು ಮಾಡಿಸಿದಾಗಲೂ ಗೊತ್ತಾಗದೆ ಶೇಕ್ಸ್‌ಪಿಯರ್ ಎಂತಲೇ ಉಚ್ಚರಿಸುವ ಶಠನಾದ ಶಕಾರನಾದಾಗ, ಅಂಥವನನ್ನ ಯಾವುದೇ ವಿಶ್ವವಿದ್ಯಾನಿಲಯ ತನ್ನ ವಿದ್ಯಾರ್ಥಿಗಳ ಜ್ಞಾನದ ಪವಿತ್ರತೆಯನ್ನು ಕಾಪಾಡಲು ಮೊದಲು ಕೆಲಸದಿಂದ ತೆಗೆದುಹಾಕಬೇಕು ; ಅಂಥವನನ್ನು ನೇಮಿಸಿಕೊಂಡ ತಪ್ಪಿಗೆ ಅವನಿಗೆ ನಿವೃತ್ತನಾಗುವ ವಯಸ್ಸಿನವರೆಗೆ ಸಂಬಳ ಕೊಟ್ಟರೂ ಚಿಂತೆಯಿಲ್ಲ, ಅವನನ್ನು ಕೂಡಲೇ ತೆಗೆದುಹಾಕಿ ಅಮಾಯಕ ವಿದ್ಯಾರ್ಥಿ ವಿದ್ಯಾರ್ಥಿನಿಯರ ಮುಗ್ಧ ಮನಸ್ಸುಗಳನ್ನು ಈ intellectual rape ನಿಂದ ಕಾಪಾಡಬೇಕು.

ಸೇಗಲ್ ಎಂಬ ಹಾರ್ ವರ್ಡ್ ಯೂನಿವರ್ಸಿಟಿಯ ಕ್ಲಾಸಿಕ್ಸ್ ಬೋಧಿಸುತ್ತಿದ್ದ ಅಧ್ಯಾಪಕನೊಬ್ಬ Love Story ಎನ್ನುವ ಕತೆಯನ್ನು ಪ್ರಕಟಿಸಿ ತನ್ನ ಬಾಲಿಶವಾದ ಬುದ್ಧಿಯನ್ನು ಬಯಲು ಮಾಡಿಕೊಂಡಿದ್ದಕ್ಕೆ, ಯೂನಿವರ್ಸಿಟಿ ಅವನನ್ನು ಕೂಡಲೇ ಕೆಲಸದಿಂದ ತೆಗೆದುಹಾಕಿತು. ಕರ್ನಾಟಕ ವಿಶ್ವವಿದ್ಯಾಲಯ ಸಂಕ್ರಮಣದ ಈ ದಾಖಲೆಯ ಮೇಲೆ ಚಂಪಾರನ್ನು ತೆಗೆದುಹಾಕೀತೇ ?

ಇದೀಗ ಬಂಡಾಯ ಸಾಹಿತ್ಯಕ್ಕೆ ಒದಗಿರುವ ವಿಪತ್ತು. ದೇವನೂರರಂಥಾ ಬಂಡಾಯ ಸಾಹಿತಿಗೆ ತಾನು ಬರೆದಿರುವ ಬರವಣಿಗೆ ಎಂಥಾದ್ದು ಎನ್ನುವುದು ಗೊತ್ತಾಗದಿದ್ದಾಗ, ಗೊತ್ತಾಗಿಸಿದಾಗಲೂ ಗೊತ್ತಾಗದಿದ್ದಾಗ: ಚಂಪಾರಂಥಾ ಬಂಡಾಯ ಸಾಹಿತಿ ಮತ್ತು ವಿಮರ್ಶಕನಿಗೆ ಬಂಡಾಯ ಸಾಹಿತ್ಯ ಗೊತ್ತಾಗದಿದ್ದಾಗ, ಗೊತ್ತಾಗಿಸಿದಾಗಲೂ ಗೊತ್ತಾಗದೇ ಇದ್ದಾಗ, ಇಂಥವರ ನಾಯಕತ್ವದ ಬಂಡಾಯ ಸಾಹಿತ್ಯದ ಗತಿ ಏನಾದೀತು ಎನ್ನುವುದು ಒತ್ತಿ ಹೇಳಬೇಕಾಗಿಲ್ಲ.

ಕನ್ನಡ ಸಾಹಿತ್ಯ ಪರಿಷತ್ತಿನವರು ಹಮ್ಮಿಕೊಂಡಿದ್ದ ಬೆಂಗಳೂರಿನ ಬಂಡಾಯ ಸಾಹಿತ್ಯ ಸಂಕಿರಣದ ಸಮಾರೋಪ ಸಮಾರಂಭ ಅಧ್ಯಕ್ಷ ಭಾಷಣ ಮಾಡಿದ ಚಂಪಾ "ಈ ಬಾರಿ ನಾವು ಬಂಡಾಯ ಸಾಹಿತ್ಯದ ಹೊರಗಿನವರಾದ ಜಿ. ಎಚ್. ನಾಯಕ ಮತ್ತು ಪೋಲಂಕಿ ರಾಮಮೂರ್ತಿಯವರನ್ನು ಕರೆದಿದ್ದೇವೆ" ಎಂದರು. ಆಮೇಲೆ ಈ ಬಾರಿಯ ಬಂಡಾಯ ಸಾಹಿತ್ಯ ಸಮ್ಮೇಳನವನ್ನು "ಬಂಡಾಯ ಸಾಹಿತ್ಯದ ಹೊರಗಿನವರು" ಆದ ಕಣವಿಯವರಿಂದ "ಉದ್ಘಾಟಿಸಿ"ಕೊಂಡರು. ಬಂಡಾಯ ಸಾಹಿತಿಗಳು ಎಲ್ಲಿಯವರೆಗೆ ಈ "ಹೊರಗಿನವರ" ಬೆನ್ನು ಕೆರೆಯುತ್ತಾ ಹೋಗುವುದು? ಬಂಡಾಯ ಸಾಹಿತ್ಯ ತನ್ನ ಈ ಅಲ್ಪಕಾಲದಲ್ಲಿ ವಿಶ್ವ ಸಾಹಿತ್ಯಕ್ಕೆ ಸಲ್ಲುವ ಕೃತಿಗಳನ್ನ ನೀಡಿದೆ: ಅದಕ್ಕೆ "ತೋಡಿದ ಬಾವಿಗೆ ಜಲವೇ ಸಾಕ್ಷಿ" ಎನ್ನುವ ಆತ್ಮವಿಶ್ವಾಸ ಇನ್ನೂ ಬಂದಿಲ್ಲ. ಬಂಡಾಯ ಸಾಹಿತ್ಯದ ಬಾವಿಯಲ್ಲಿ ಜಲಬಿದ್ದಿದೆ, ಎಂದು ಆಳಕ್ಕಿಳಿದವನು ಕೂಗಿ ಹೇಳಿದಾಗ, ದಡದಲ್ಲಿದ್ದ ಶಿಷ್ಟಭೂಗರ್ಭ ಶಾಸ್ತ್ರಜ್ಞನನ್ನ "ಹೌದೇ, ನಿಜವೇ, ಜಲವು ಸಂಹನವಾಗಿದೆಯೇ" ಎಂದು ಗೋಗರೆಯುತ್ತಿರುವ ನಮ್ಮ ಮುಖಂಡರುಗಳಿಗೆ ಏನೆನ್ನಬೇಕು?

ಬಂಡಾಯ ಸಾಹಿತಿಗಳು ಮೊಟ್ಟ ಮೊದಲು ಮಾಡಬೇಕಾದ್ದು—ಅವರು ಬರೆಯುತ್ತಿರುವ ಬಾಸೆ (ಭಾಷೆಯಲ್ಲ!) ಯಲ್ಲಿ ಮಾತಾಡಬೇಕು, ಕೂಡಬೇಕು, ಪರಿಸೆ ನಡಸಬೇಕು; ಆಂಡಯ್ಯನಂತೆ ಸಂಸ್ಕೃತವನ್ನ ಹಠದಿಂದ ಹೊರಗೆ ಹಾಕಬೇಕು. ಬುದ್ಧ ಬಸವರು ಅದನ್ನ ಕಂಡಂತೆ ಪಿಡುಗಾಗಿ ಕಾಣಬೇಕು. ತನು ಕನ್ನಡ, ಮನಕನ್ನಡ, ನುಡಿ ಕನ್ನಡವೆಂದು ಕನ್ನಡವನ್ನ ಉಸಿರಾಡಬೇಕು, ನಗಬೇಕು, ಅಳಬೇಕು, ಬಿಕ್ಕಬೇಕು ಸಾಯ್ಬೇಕು. ಮುಂಗುಳು ನಗಬೇಕು.

ಬಂಡಾಯಕ್ಕೆ "ಕರೆಯೋಲೆ" ಕೊಡಬೇಕು, "ಆಮಂತ್ರಣ"ವಲ್ಲ: "ಒಕ್ಕೂಟ" ಮಾಡಬೇಕು, "ಸಂಕಿರಣ"ವಲ್ಲ, "ಗೋಷ್ಠಿ"ಯಲ್ಲ; "ಆರಂಭ" (ಆರು-ನೇಗಿಲು, ಆರಂಭ-ಉಳು) ಮಾಡಬೇಕು, "ಉದ್ಘಾಟನೆ"ಯಲ್ಲ; "ಮುಕ್ತಾಯ" ಮಾಡಬೇಕು, "ಸಮಾರೋಪ"ವಲ್ಲ. ಬಂಡಾಯ ಸಾಹಿತಿಗಳನ್ನು, ಜಾನಪದ ಕಲಾವಿದರನ್ನು ಕರೆಸಬೇಕು, ಮಾತಾಡಿಸಬೇಕು, ಆರಂಭ ಮುಕ್ತಾಯ ಅವರಿಂದಲೇ ಮಾಡಿಸಬೇಕು, "ಹೊರಗಿನ"ವರಾದ "ಸಂಸ್ಕೃತ ಸಂವಹನಶೀಲ"ಶಿಷ್ಟರಿಂದಲ್ಲ, ವೈದಿಕರಿಂದಲ್ಲ, ಪುರೋಹಿತಶಾಹಿಗಳಿಂದಲ್ಲ. ●

# ಅರೆ ಎಚ್ಚರದ ಜ್ಞಾನ ಜಿಜ್ಞಾಸೆ

### ಸುರುಳಿ - ಒಂದು

ಸೋಲುತಿವೆ ಕಣ್ಣುಗಳು
ಚಂದಿರನು ಕದಿಯುವ ಕತ್ತಲೆಯು ಗಾತ್ರ ತಿಳಿಯಲು
ಸೀಮೆಸುಣ್ಣದಲಿ ಮಂಗ ಬಿಡಿಸುವ ಚಿತ್ರ ಸವಿಯಲು
ಮನೆಯೊಳಗೆ ಪುಟಾಣಿ ಹೆಜ್ಜೆಗಳನಿಡುವ
ಪಾಮರಿನ ಬೆಳ್ಳಿಗೂದಲ ಕಾಣಲು
ಕಾಣುತ್ತಲೇ ಒಳಗೊಳಗೆ ಮುದಗೊಳಲು ಹದಗೊಳಲು
ಸೋಲುತ್ತಿವೆ ಈ ಜೋಡಿ ಕಣ್ಣುಗಳು

### ಸುರುಳಿ - ಎರಡು

ಹದ್ದಿನಂತೆ ಇಣುಕುವ ಸೌರಮಂಡಲ ವ್ಯಾಪಾರ
ರೆಕ್ಕೆ ಬಿಚ್ಚಿತೋ ಏನೊ, ಕೊಕ್ಕು ಚಾಚಿತೋ ಏನೋ
ಶಬ್ದವೆಂಬ ಶಬ್ದ ಶಬ್ದವೇದಿಯು ವಿದ್ಯೆ
ಕಣ್ಣಿಗಗೋಚರ ಕಿವಿ ಮುನಿಸಿಕೊಂಡ ಸಮಯ
ಸಾವು ಹತ್ತಿರದ ಸೀಗೆ ಮೆಳೆ ಮೇಲೆ ಮೇಲೆ
ನಿರ್ವಾತದಲ್ಲೂ ಬೇಹುಗಾರಿಕೆಯು ಸಂಚು

### ಸುರುಳಿ - ಮೂರು

ಯಾಕೆ ಗ್ರಹತಾರೆ ನೀಹಾರಿಕೆಗಳು ಒಳಗೊಳಗೆ
ಜಗಳಕ್ಕಿಳಿದವೋ ಕಾಣೆ – ಪರೀಕ್ಷೆಯು ಕಾಲವಿದು
ಕಾಲವೆಂದರೆ ಕಾಲ ಕಾಲಾತೀತರ ಕಾಲ
ಕಾಲ ಬುಡದಲ್ಲೆ ನೂರೆಂಟು ತಕರಾರು
ಹೊಲೆದ ಅಂಗಿಯು ತುಂಬ ತೇಪೆಗಳು ಹಲವಾರು
ಜೋತು ಬೀಳುವ ಹಕ್ಕಿಗಳ ಓಡೋಡಿ
ಹಿಡಿದವರುಂಟೆ ರೆಕ್ಕೆಗಳ ಮುರಿದವರುಂಟೆ
ನಿಶೆಯಲ್ಲೂ ಅವು ಸರಾಗ ಹಾರಿಬಂದರೆ
ಮರೆಯುದಲೆ ಬಾಚಿಕೊಳ್ಳಬೇಕು ಮೈದಡವ ಬೇಕು
ಯಾಕೊ ಕಣ್ಣುಗಳು ಕೆಲಸಮಾಡುತ್ತಿಲ್ಲ

---

ಮುನಿಕೃಷ್ಣಪ್ಪ, ಕನ್ನಡ ವಿಭಾಗ, ಕೆ.ಇ.ಬಿ., ಕಾವೇರಿಭವನ, ಬೆಂಗಳೂರು-2

## ಸುರುಳಿ - ನಾಲ್ಕು

ಗಾಜಿನಂಗಡಿಮುಂದೆ ನಿಂತ ಮಗುವಿನ ಮುಗ್ಧತೆಯೋ
ಕತ್ತಲೆ ಸಾಮ್ರಾಜ್ಯದಲಿ ಎದುರು ನುಗ್ಗುವ
ಅಪಾರ ಬೆಳಕೊ, ಯಾವುದಿದು ?
ಕಣ್ಣನೊಳಗಿಳಿದು ಮೈಮನಸ್ಸುಗಳ ಅಮರಿಕೊಂಡಿದೆ
ಅಮರತ್ವ ಕಾಣದ ಒಡಕಾಯವಿದು
ಬೆವತು ಹೋಗಿದೆ ಒಸವಳಿದು
ತಂಪು ತರುವರು ಯಾರು ತಂಪು ಒರುವುದೆ ಹೇಳು
ಒಡಲ ಕರುಳ ತೆರೆದಿಟ್ಟು ಪೂಜಿಸಲೆ ಹೇಳು ?

## ಸುರುಳಿ - ಐದು

ಯಾವ ಪಾಪಕ್ಕಿದು ಶಾಪ
ಶಾಪವೆಂದರೆ ಶಾಪ ಇಂದ್ರ ಚಾಪ
ಮತ್ತೆ ಮೈದೋರಬಹುದು ಆಗಸದ ಬೆನ್ನಲ್ಲಿ
ಇಳೆ ತಣಿಯಬಹುದು ತಣಿಯದಿರಬಹುದು
ಮರೆತು ಮುಗಿಸುವ ಆದೆಷ್ಟೊ ಕಾಯರಹಿತ
ಕಾಯಕಗಳಂತೆ ಮತ್ತೆ ಮತ್ತೆ

## ಸುರುಳಿ - ಆರು

ತಿರುಗಣೆಯ ಯಂತ್ರ ರವಷ್ಟು ಕೈಕೊಟ್ಟು
ರಾತ್ರಿ ಪಾಳಿಯ ಹೈದ ನಿಷಿದ್ಧ
ಪದ-ಚಿತ್ರಗಳಿಗೆ ಶರಣುಹೋದ ವೇಳೆ
ಮೆದುಳು ನರಮಂಡಲ ಕೇಂದ್ರ ಸ್ಥಾನ
ಸರಿಸಾಟಿಯೇನು ಸ್ಥಾನಬಲಕ್ಕೆ ಸ್ನಾಯುಬಲ
ಬಲವೆಂದರೆ ಬಲ ಎಡ-ಬಲ ಬಲಾಬಲ

## ಸುರುಳಿ - ಏಳು

ಅಲನೆ ದೇಹಕ್ಕೆ ಕಾಣದ ಕಣ್ಣು
ವರವಾಗುವುದು ಬೇಡ ಬೇಡ
ಸ್ವಚ್ಛಂದ ಛಂದಕ್ಕೆ ಪದಗಳ ಅಪಭ್ರಂಶ
ನಿಂತ ನೆಲಕ್ಕೆ ಕಾವು ಕಾವು ಕೂರುವ ಹಕ್ಕಿ

ಮರಿಹಕ್ಕಿ ಜೊತೆಗೂಡಿ ನಭಕ್ಕಭಿಮುಖವಾಗಿ
ಹಾರುವಾಗಿನ ಗಳಿಗೆ ಶುಭಗಳಿಗೆ
ಗಳಿಗೆ ಗಳಿಗೆಗೂ ತರ್ಕಕ್ಕೆಡೆಯಿರದೆ ಕಾಣುವ ತವಕ
ಕರೆದರೆ ಓಡಿಬರುವುದೆ ಬೆಳಕು
ಮುಗ್ಧ ಕರುವಿನ ಹಾಗೆ
ಕಣ್ಣಾಲಿಗಳ ಜೊತೆಗೂಡಿ ಒಡನಾಡಿ
ಕಣದ ಗುಂಡಿನ ಹಾಗೆ
ಕಾಲ ಸರಿಯುತಿದೆ
ಒಪ್ಪತ್ತು ಯೋಚನೆಯಲಿ ಒಪ್ಪತ್ತು ನಿದುರೆಯಲಿ

— ಕೆ. ಎಂ. ಮುನಿಕೃಷ್ಣಪ್ಪ

## ರಾಮಚಂದ್ರ ಶರ್ಮ

ಈತನ ದಣಿವಿಗೆ
ಹನಿಗಳು ತಣಿಸುವುದಿಲ್ಲ
ಮುಗಿಲಿಲ್ಲೇ ಹಾರಿ
ಸಾಗರಗಳನ್ನ ದಾಟಿ
ಸುತ್ತಿ ಬಂದು ಭೂಮಿ
ಭೂಪಟದಲ್ಲಿ ನಿಂತ
ನೀರ ನೆನೆಯುಂತ್ತ
ಕೂತ ಭೂಪನಿಗೆ
ನಮ್ಮ ನಡುವಿನ
ಕೆರೆ ಕುಂಟೆ ಬಾವಿಗಳು
ಲೆಕ್ಕಕ್ಕಿಲ್ಲ

ಮೈ ಮರೆತು ತಲೆನೆರೆತು
ಪರಾಶರನ ಬೆಚ್ಚನೆ ಮನೆಯಲ್ಲಿ
ಕೂತ ಕಾವ್ಯಸುತನಿಗೆ
ಹನಿಗಳ ತಂಡಿ ತಟ್ಟುವುದಿಲ್ಲ

ಜರಗನಹಳ್ಳಿ ಶಿವಶಂಕರ್, ಜರಗನಹಳ್ಳಿ, ಜೆ. ಪಿ. ನಗರ ಅಂಚೆ, ಬೆಂಗಳೂರು-560 078

ಮಾತಿನ ಮೋಡಿಯು
ಲೀಲಾಜಾಲದ ಗಾರುಡಿಗನಿಗೆ
ಬೆವರ ಹನಿಗಳೂ ಬರುವುದಿಲ್ಲ
ಕುಡಿಯುತ್ತ, ಸೇದುತ್ತ
ಕಾವ್ಯದ ಕಾರಭಾರಿನ ನಡುವೆ
ಯಾವ ಇಬ್ಬನಿಯು ಚಳಿಯು
ಸುಳಿಯುವುದಿಲ್ಲ

ಇಲ್ಲಿನ ಕೊಳೆಗೆ
ಕೊರಡು ಬರಡಿಗೆ
ಗುಂಡ್ಗ ಗಾಡು ನಾಡೆಲ್ಲ
ಹಸಿರ ಬೆಳೆಗೆ
ಏಂಬು ಗುಡುಗು
ಮಲೆನಾಡ ಮಳೆಗೆ
ಬಯಸುತ್ತ
ಒಳಗೆ ಹೊಳೆಗೆ
ನಿವೇದನೆ ಮೂಕವೇದನೆ
ಸದಾ ಗಟ್ಟಿಯು ಕಡೆಗೆ

— ಜರಗನಹಳ್ಳಿ ಶಿವಶಂಕರ್

## ಕಾವ್ಯವನ್ನೇಕೆ ಓದಬೇಕು ?

— ಜೋಸೆಫ್ ಬ್ರಾಡ್‌ಸ್ಕಿ

1988ರ ನೊಬೆಲ್ ಪ್ರಶಸ್ತಿ ವಿಜೇತ ಸೋವಿಯತ್ ಸಾಹಿತಿ ಜೋಸೆಫ್ ಬ್ರಾಡ್‌ಸ್ಕಿ ಈಗ ಅಮೆರಿಕದ ರಾಷ್ಟ್ರಕವಿ. ಸೋವಿಯತ್ ಒಕ್ಕೂಟದಿಂದ 1972 ರಲ್ಲಿ ಬಹಿಷ್ಕೃತಗೊಂಡ ಬ್ರಾಡ್‌ಸ್ಕಿ ಅಂದಿನಿಂದ ಅಮೆರಿಕೆಯಲ್ಲಿಯೇ ನೆಲೆಸಿದ್ದಾರೆ. ಪುಸ್ತಕ ಮೇಳದ ಉದ್ಘಾಟನೆ ಸಂದರ್ಭದಲ್ಲಿ ಆಡಿದ ಈ ಕೆಲವು ಮಾತುಗಳು ತುಂಬಾ ಮನನೀಯವಾಗಿವೆ:

"ಸಾಹಿತ್ಯದಲ್ಲಿ ಉತ್ತಮ ಅಭಿರುಚಿಯನ್ನು ಬೆಳೆಸಿಕೊಳ್ಳುವ ಮಾರ್ಗವೆಂದರೆ ಕಾವ್ಯವನ್ನು ಓದುವುದು. ಮಾನವೀಯ ಅಭಿವ್ಯಕ್ತಿಯ ಸರ್ವೋಚ್ಚ ರೀತಿಯಾಗಿ,

ಎಂ.ಎಸ್. ರಘುನಾಥ್, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು

ಕಾವ್ಯವು ಅತ್ಯಂತ ಸಂಕ್ಷಿಪ್ತ ಮಾತ್ರವಲ್ಲ, ಮಾನವೀಯ ಅನುಭವವನ್ನು ತಿಳಿಸುವ ಅತ್ಯಂತ ಘನೀಕೃತವಾದ ಮಾರ್ಗವೂ ಆಗಿದೆ. ಅದು ಯಾವುದೇ ಭಾಷಾ ಸಂವಹನ ಕ್ರಿಯೆಯ ಅತ್ಯುನ್ನತ ಮಟ್ಟವನ್ನು ಕಾಯ್ದುಕೊಳ್ಳುತ್ತದ.

ಹೀಗೆಂದ ಮಾತ್ರಕ್ಕೆ ನಾನು ಗದ್ಯವನ್ನು ಖಂಡಿಸುತ್ತಿದ್ದೇನೆಂದು ಅರ್ಥವಲ್ಲ. ಸತ್ಯ ಸಂಗತಿಯೆಂದರೆ, ಕಾವ್ಯವು ಗದ್ಯಕ್ಕಿಂತ ಹೆಚ್ಚು ಪುರಾತನವಾದುದು ಹಾಗೂ ಹೆಚ್ಚು ದೂರದಿಂದ ನಡೆದುಬಂದಿದೆ. ಸಾಹಿತ್ಯ ಆರಂಭವಾದದ್ದು ಪದ್ಯದಿಂದ, ಅಲೆ ಮಾರಿಗಳ ಹಾಡುಗಳಿಂದ, ಬರವಣಿಗೆ ಬರುವ ಮೊದಲೆ ಕಾವ್ಯ ಉಂಟಾದದ್ದು ಪದಗಳ ಮಿತವಾದ ಬಳಕೆಗೋಸ್ಕರ. ಕಾವ್ಯದ ಗ್ರಂಥಗಳು ಗದ್ಯ ಗ್ರಂಥಗಳಿಗಿಂತ ಕಡಿಮೆ ಗಾತ್ರದ್ದಾಗಿದೆ. ನಿಮಗೆ ಸಮಕಾಲೀನ ಸಾಹಿತ್ಯದಲ್ಲಿ ಆಸಕ್ತಿಯಿದ್ದರೆ, ನಿಮ್ಮ ಮಾತೃ ಭಾಷೆಯಲ್ಲಿನ ಕವಿಗಳ ಕೃತಿಗಳನ್ನು ಒಂದೆರಡು ತಿಂಗಳವರೆಗೆ ಅಭ್ಯಾಸ ಮಾಡಿರಿ. ಆ ಅವಧಿಯ ಕೊನೆಗೆ ನಿಮ್ಮ ಸಾಹಿತ್ಯಕ ಅಭಿರುಚಿ ಉತ್ತಮಗೊಂಡಿರುತ್ತದೆ.

ನಿಮ್ಮ ಮಾತೃಭಾಷೆ ಇಂಗ್ಲಿಷ್ ಆದರೆ, ನಾನು ನಿಮಗೆ ಓದಲು ರಾಬರ್ಟ್ ಫ್ರಾಸ್ಟ್, ಥಾಮಸ್ ಹಾರ್ಡಿ, ಡಬ್ಲ್ಯು. ಬಿ. ಯೇಟ್ಸ್, ಟಿ. ಎಸ್. ಎಲಿಯಟ್, ಡಬ್ಲ್ಯು. ಎಚ್. ಆಡನ್, ಇವರುಗಳನ್ನು ಶಿಫಾರಸು ಮಾಡುತ್ತೇನೆ. ನೀವು ರಷ್ಯನ್ ಭಾಷೆಯನ್ನು ಬಲ್ಲವರಾದರೆ, ಕಡೇ ಪಕ್ಷ ಅನ್ನಾ ಅಖ್ಮತೋತಿ, ಬೋರಿಸ್ ಪೇಸ್ಟರ್ ನಾಕ್ ಇವರುಗಳನ್ನಾದರೂ ಶಿಫಾರಸು ಮಾಡುತ್ತೇನೆ. (ಇತರ ಯೂರೋಪಿಯನ್ ಭಾಷೆಗಳ ಲೇಖಕರನ್ನೂ ಬ್ರಾಡ್ಸ್ಕಿ ಹೆಸರಿಸಿದ್ದಾರೆ).

ಈ ಹೆಸರಿಸಿದ ಲೇಖಕರ ಕೃತಿಗಳನ್ನು ಓದಿದ ಮೇಲೆ ಗದ್ಯಕೃತಿಯನ್ನು ನೀವು ಆರಿಸಿಕೊಂಡರೆ, ಅದು ನಿಮ್ಮ ತಪ್ಪಾಗಲಾರದು. ಅದನ್ನೇ ನೀವು ಓದಲು ಮುಂದು ವರಿಸಿದರೆ, ಅದು ಆಯಾ ಲೇಖಕರ ಮನ್ನಣೆಯನ್ನು ಅವಲಂಬಿಸಿರುತ್ತದೆ. ಮೇಲೆ ಹೆಸರಿಸಿದ ಕೆಲವು ಕವಿಗಳಿಗೆ ತಿಳಿದಿರುವಂತೆ, ನಮ್ಮ ಅಸ್ತಿತ್ವದ ಬಗೆಗಿನ ಸತ್ಯಕ್ಕೆ ಈ ಲೇಖಕನೂ ಸೇರಿಸಬೇಕಾದ ಅಂಶಗಳಿವೆಯೆಂಬುದು ತಿಳಿಯುತ್ತದೆ. ಅಲ್ಲದೆ ನಾನು ಹೇಳುತ್ತಿರುವುದು ಚರ್ವಿತಚರ್ವಣವಲ್ಲ, ನನ್ನ ಭಾಷೆಗೂ ಸ್ವತಂತ್ರವಾದ ಚೈತನ್ಯ ವಿದೆಯೆಂಬುದು ಮನಸದಟ್ಟಾಗಬಹುದು. ●

# ಒಕೊಂಕೊ

**— ಚಿನುಅ ಅಚಿಬೆ**

## ಅಧ್ಯಾಯ ನಾಲ್ಕು

"ದೊರೆಯ ಬಾಯನ್ನು ನೋಡಿದ್ರೆ," ಮುದುಕನೊಬ್ಬ ಹೇಳುತ್ತಿದ್ದ, "ಆತ ತಾಯಿ ಹಾಲನ್ನೇ ಕುಡಿಯದವ ಅನ್ನಿಸಬಹುದು." ವಾಸ್ತವವಾಗಿ ಅವನು ಹೇಳುತ್ತಿದ್ದುದು ಕಡುಬಡತನ ಮತ್ತು ದಾರುಣಸ್ಥಿತಿಯಿಂದ ಏಕ್‌ದಂ ಬಂಡಕಟ್ಟಿನ ಒಬ್ಬ ಮುಖಂಡನಾಗಿ ಮೇಲೇರಿದ ಒಕೊಂಕೊನ ಬಗ್ಗೆ. ಅವನ ಶ್ರದ್ಧೆ ಮತ್ತು ಯಶಸ್ಸು ಕುರಿತು ಅವನಿಗೆ ಗೌರವವಿತ್ತು. ಆದರೆ ಯಶಸ್ವಿಗಳಲ್ಲದ ಜನರನ್ನು ಒಕೊಂಕೊ ನಿಕೃಷ್ಟವಾಗಿ ಕಾಣುವಾಗ ಇತರರಂತೆ ಅವನಿಗೂ ಆಶ್ಚರ್ಯವಾಗಿತ್ತು. ಮುಂದಿನ ಹೆತ್ತಮುತ್ತರ ಹಬ್ಬದ ಬಗ್ಗೆ ವಿಚಾರ ಮಾಡಲು ಕೇವಲ ಒಂದು ವಾರದ ಹಿಂದೆಯಷ್ಟೇ ಸೇರಿದ್ದ ಕೂಟದಲ್ಲಿ ಒಬ್ಬ ಅವನ ಮಾತಿಗೆ ವಿರೋಧವಾಗಿ ನುಡಿದಿದ್ದ. ಅವನ ಕಡೆ ತಿರುಗಿ ನೋಡದೆಯೇ ಒಕೊಂಕೊ ಹೇಳಿದ್ದ: "ಈ ಕೂಟ ಕರೆದಿರೋದು ಗಂಡಸರಿಗಾಗಿ." ಅವನ ಮಾತಿಗೆ ವಿರೋಧವಾಡಿದ ಆ ಆಸಾಮಿಗೆ ಯಾವ ಬಿರುದೂ ಇರಲಿಲ್ಲ, ಆ ಕಾರಣಕ್ಕಾಗಿಯೇ ಆತ ಅವನನ್ನು ಹೆಂಗಸು ಅಂತ ಕರೆದಿದ್ದು. ಒಬ್ಬ ವ್ಯಕ್ತಿಯ ತೊಳ್ಳೆ ನಡುಗಿಸುವ ಹುನ್ನಾರು ಒಕೊಂಕೊಗೆ ಗೊತ್ತಿತ್ತು.

ನೆಂಟರು ನೆರೆದ ಸಂದರ್ಭದಲ್ಲಿ ಅವರೆಲ್ಲ ಒಕೊಂಕೊ ಹೆಂಗಸು ಅಂತ ಜರೆದಿದ್ದ ಒಸುಗನ ಪರ ವಹಿಸಿದ್ದರು. ಅದೃಷ್ಟ ದೇವತೆಯ ಸಹಾಯದಿಂದ ತೆಂಗಿನ ಚಿಪ್ಪು ಒಡೆಯಿಸಿಕೊಳ್ಳುವವರು ವಿನಯವಾಗಿ ವರ್ತಿಸುವುದನ್ನು ಮರೆಯಬಾರದೆಂದು ಆ ಗುಂಪಿನಲ್ಲಿದ್ದ ಒಬ್ಬ ಹಿರೀಕ ಹೇಳಿದ್ದ. ತಾನು ಅಂದದ್ದು ತಪ್ಪಾಯಿತೆಂದು ಒಕೊಂಕೊ ಹೇಳಿದ ನಂತರ ಕೂಟ ಮುಂದುವರಿಯಿತು.

ವಾಸ್ತವದ ಸಂಗತಿಯೆಂದರೆ ಕೇವಲ ಅನುಕೂಲ ದೇವತೆಯೇ ಒಕೊಂಕೊವಿನ ತೆಂಗಿನ ಚಿಪ್ಪು ಒಡೆದಿರಲಿಲ್ಲ. ತಾನೇ ಆ ಕೆಲಸ ಮಾಡಿದ್ದ. ಅವನು ತನ್ನ ಪಾಡು ಮತ್ತು ಬಡತನದ ವಿರುದ್ಧ ಅವನು ಹೋರಾಡಿದ್ದನ್ನು ಕಂಡವರು ಅವನು ಅದೃಷ್ಟವಂತ ಅಂತ ಹೇಳುತ್ತಿರಲಿಲ್ಲ. ಯಾವನಾದರೂ ಯಶಸ್ಸಿಗೆ ಅರ್ಹನಾಗಿದ್ದರೆ ಆ ವ್ಯಕ್ತಿ ಒಕೊಂಕೊನೇ ಆಗಿದ್ದ. ಬಹಳ ಚಿಕ್ಕ ವಯಸ್ಸಿನಲ್ಲೇ ಸುತ್ತಮುತ್ತಲ ತಾಕಿನಲ್ಲೆಲ್ಲಾ ದೊಡ್ಡ ಕುಸ್ತಿಗಾರನೆಂದು ಹೆಸರು ಮಾಡಿದ್ದ. ಇದು ಅದೃಷ್ಟವಲ್ಲ. ಅಬ್ಬಬ್ಬಾ ಅಂದರೆ ಅವನಿಗೆ ಅವನ 'ಚಿ' ಅಥವಾ ಸ್ವಂತ ದೇವತೆಯ ಕಟಾಕ್ಷವಿತ್ತು ಎನ್ನಬಹುದಾಗಿತ್ತು. ಇಬೊ ಜನರಲ್ಲಿರುವ ಒಂದು ಗಾದೆಯಂತೆ ಒಬ್ಬ ವ್ಯಕ್ತಿ ಹೌದು ಎಂದರೆ ಅವನ 'ಚಿ'ಕೂಡ ಹೌದು ಎನ್ನುತ್ತದೆ. ಒಕೊಂಕೊ ಬಹಳ ದೃಢವಾಗಿ ಹೌದು ಎಂದ,

---

ನಾಗಣ್ಣ, ಟಿ-52, ಶಿಕ್ಷಕರ ಮನೆಗಳು, ಮಾನಸಗಂಗೋತ್ರಿ, ಮೈಸೂರು-6

ಅವನ 'ಚಿ' ಆದಕ್ಕೆ ಒಪ್ಪಿದ. ಹೌದು ಎಂದದ್ದು ಕೇವಲ ಅವನ 'ಚಿ' ಅಷ್ಟೇ ಅಲ್ಲ ಅವನ ಬುಡಕಟ್ಟಿನವರೂ ಸಹ-ಕಾರಣ ಅವರು ಒಬ್ಬ ವ್ಯಕ್ತಿಯನ್ನು ಅಳೆಯುತ್ತಿದ್ದುದು ಅವನ ರಟ್ಟೆಯ ದುಡಿಮೆಯಿಂದ. ಆದ್ದರಿಂದಲೇ ಶತ್ರುಗಳು ಉದೋನ ಹೆಂಡತಿಯನ್ನು ಕೊಲೆಗೈದುದಕ್ಕೆ ಉತ್ತರವಾಗಿ ಒಬ್ಬಳು ಕನ್ಯೆ ಮತ್ತು ಒಬ್ಬ ಪಡ್ಡೆ ಹುಡುಗನನ್ನು ಕೊಡಲು ಒಪ್ಪದಿದ್ದರೆ ಕಾಳಗಕ್ಕೆ ತಯಾರಾಗಬೇಕೆಂದು ತಿಳಿಸಲು ಒಕೊಂಕೊ ಸುತ್ತಲ ಒಂಭತ್ತು ಗ್ರಾಮಂದವರಿಂದ ಚುನಾಯಿತವಾಗಿದ್ದ. ಉಮೊಫಿಯಾದ ಹೆಸರು ಎತ್ತಿದರೆ ಭಯಪಡುತ್ತಿದ್ದ ಶತ್ರುಗಳು ಒಕೊಂಕೊನನ್ನು ರಾಜನಂತೆ ಉಪಚರಿಸಿದ್ದಲ್ಲದೆ ಅವರು ಒಪ್ಪಿಸಿದ ಕನ್ಯೆಯನ್ನು ಉದೋನ ಹೆಂಡತಿಯಾಗಿ ಕಳುಹಿಸಲಾಯಿತು, ಮತ್ತು ಅವಳ ಜೊತೆ ಬಂದ ಇನ್ನೊಬ್ಬ ಹುಡುಗನೇ ಇಕೆಮೆಫೂನಾ.

o o o o o o

ಇಕೆಮೆಫೂನಾ ಸ್ವಲ್ಪ ಕಾಲದ ತನಕ ಒಕೊಂಕೊನ ಮನೆಯಲ್ಲಿರಬೇಕೆಂದು ಬುಡಕಟ್ಟಿನ ಹಿರಿಯರು ತೀರ್ಮಾನಿಸಿದರು. ಆದರೆ ಆ ಅವಧಿ ಮೂರು ವರ್ಷಗಳಿಗೆ ವಿಸ್ತರಿಸಬಹುದೆಂದು ಯಾರೂ ಆಲೋಚಿಸಿರಲಿಲ್ಲ. ಅವರು ಆ ರೀತಿ ತೀರ್ಮಾನ ಕೈಗೊಂಡ ನಂತರ ಆತನ ಬಗ್ಗೆ ಸಂಪೂರ್ಣವಾಗಿ ಮರೆತು ಬಿಟ್ಟರು.

ಮೊದಮೊದಲು ಇಕೆಮೆಫೂನಾಗೆ ಅತ್ಯಂತ ಭಯವಾಗಿತ್ತು. ಒಂದೆರಡು ಬಾರಿ ಓಡಿಹೋಗಲು ಪ್ರಯತ್ನಪಟ್ಟಿದ್ದನಾದರೂ ಹೇಗೆ ಶುರುಮಾಡಬೇಕೆಂದು ತಿಳಿದಿರಲಿಲ್ಲ. ತನ್ನ ತಾಯಿ ಮತ್ತು ಮೂರು ವರ್ಷದ ತಂಗಿಯನ್ನು ನೆನೆದು ಬಹಳವಾಗಿ ಅತ್ತಿದ್ದ. ನೋಯೆಯ ತಾಯಿ ಅವನನ್ನು ದಯೆಯಿಂದ ಕಂಡಳಲ್ಲದೆ ತನ್ನ ಉದರದಲ್ಲಿ ಹುಟ್ಟಿದ ಮತ್ತೊಂದು ಕೂಸಿನಂತೆಯೇ ನೋಡಿಕೊಂಡಳು. ಆದರೆ ಅವನು ಮಾತ್ರ ಹೇಳಿದ್ದಿಷ್ಟೆ: "ನಾನ್ಯಾವಾಗ ಮನೆಗೆ ಹೋಗುವುದು?" ಅವನು ಊಟಗೀಟ ತೆಗೆದುಕೊಳ್ಳುತ್ತಿಲ್ಲ ಎಂಬ ವಿಚಾರ ತಿಳಿದ ಕೂಡಲೇ ಗುಡಿಸಿಲೊಳಗೆ ಬಂದ ಒಕೊಂಕೊ ಕೈಯ್ಯಲ್ಲಿ ಸೆಬ್ಬೆ ಹಿಡಿದು ನಿಂತಾಗ ಭಯದಲ್ಲಿ ನಡುಗುತ್ತಾ ಇಕೆಮೆಫೂನಾ ಗಬಗಬನೆ ಸುವರ್ಣಗಡ್ಡೆಯನ್ನು ನುಂಗಿದ. ಸ್ವಲ್ಪ ಸಮಯದ ನಂತರ ಗುಡಿಸಿಲ ಹಿಂಭಾಗಕ್ಕೆ ಹೋಗಿ ತಿಂದಿದ್ದೆಲ್ಲವನ್ನೂ ವಾಂತಿ ಮಾಡಿಬಿಟ್ಟ. ನೋಯೆಯ ತಾಯಿ ಅವನ ಬಳಿ ಹೋಗಿ ಎದೆ ಮತ್ತು ಬೆನ್ನಮೇಲೆ ಕೈಗಳನ್ನಿಟ್ಟಳು. ಮೂರು ಸಂತೆವಾರಗಳ ಕಾಲ ಅವನು ಖಾಯಿಲೆ ಬಿದ್ದ. ಗುಣಮುಖನಾದ ಮೇಲೆ ಅವನು ಭಯ ಮತ್ತು ದುಃಖವನ್ನು ಮೀರಿದವನಂತೆ ಗೋಚರಿಸಿದ.

ವಾಸ್ತವವಾಗಿ ಅವನು ಬಹಳ ಲವಲವಿಕೆಯಿಂದ ಇರುವ ಸ್ವಭಾವದವನೇ, ಹಾಗಾಗಿ ಅವನು ಒಕೊಂಕೊವಿನ ಮನೆಯಲ್ಲಿ, ಅದರಲ್ಲೂ ವಿಶೇಷವಾಗಿ ಮಕ್ಕಳೊಡನೆ

ಅವನು ಹೆಚ್ಚು ಬಳಕೆಯಾದ. ಅವನಿಗಿಂತ ಎರಡು ವರ್ಷಕ್ಕೆ ಚಿಕ್ಕವನಾದ ಒಕೊಂಕೊವಿನ ಮಗ ನೋಯೆ ಅವನ ಜೋಡಿ ಒಡೆಯುದಂತಾದುದಕ್ಕೆ ಕಾರಣ ಇಕೆಮೆಫೂನಾ ಎಲ್ಲವನ್ನೂ ಬಲ್ಲವನೆಂದು ತೋರಿದ್ದು. ಬಿದಿರಿನಿಂದ ಮತ್ತು ಒಂದು ಬಗೆಯ ಜೊಂಡಿನಿಂದ ಅವನು ಕೊಳಲು ತಯಾರಿಸಬಲ್ಲವನಾಗಿದ್ದ. ಎಲ್ಲ ಪಕ್ಷಿಗಳ ಹೆಸರೂ ಅವನಿಗೆ ಗೊತ್ತಿತ್ತು. ಮತ್ತು ಪೊದೆಯ ಇಲಿ ಹೆಗ್ಗಣಗಳಿಗೆ ಅಡಚಲು ಇಡುವ ಹುನ್ನಾರನ್ನೂ ತಿಳಿದಿದ್ದ. ಯಾವ ಮರದ ರೆಂಬೆಯಿಂದ ಪೊಗದಸ್ತಾದ ಬಿಲ್ಲು ತಯಾರಿಸಬಹುದೆಂಬೂ ಗೊತ್ತಿತ್ತವನಿಗೆ.

ಒಕೊಂಕೊ ಕೂಡ ಆ ಹುಡುಗನನ್ನು ಇಷ್ಟಪಡತೊಡಗಿದ–ಆದರೆ ಅಂತರಂಗದಲ್ಲಿ ಮಾತ್ರ. ಕೋಪದ ಭಾವನೆಯನ್ನು ಬಿಟ್ಟು ಉಳಿದ ಯಾವುದೇ ಭಾವನೆಯನ್ನು ಒಕೊಂಕೊ ಬಹಿರಂಗವಾಗಿ ತೋರಿಸಿಕೊಳ್ಳುತ್ತಿರಲಿಲ್ಲ. ಪ್ರೀತಿ ತೋರಿಸುವುದು ದೌರ್ಬಲ್ಯದ ಚಿಹ್ನೆ. ಬಲವನ್ನಷ್ಟೇ ಬಹಿರಂಗವಾಗಿ ತೋರಿಸಬೇಕು. ಹಾಗಾಗಿ ಉಳಿದವರನ್ನು ಕಾಣುವಂತೆಯೇ ಇಕೆಮೆಫೂನಾನನ್ನೂ ಸಹ ಅವನು ನಡೆಸಿಕೊಂಡ–ಒರಟಾಗಿ. ಆದರೆ ಆ ಹುಡುಗನನ್ನು ಅವನು ಇಷ್ಟಪಟ್ಟಿದ್ದನೆಂಬುದು ನಿಜ ಸಂಗತಿ. ಕೆಲವು ವೇಳೆ ಗ್ರಾಮದ ದೊಡ್ಡಕೂಟಗಳಿಗೋ ಅಥವಾ ಹತ್ತಿರ ಮುತ್ತರ ಹಬ್ಬಕ್ಕೋ ಒಕೊಂಕೊ ಹೋಗುವಾಗ ಅವನ ಪೀಠವನ್ನು ಮತ್ತು ಆಡಿನ ಚರ್ಮದ ಚೀಲವನ್ನು ಹೊತ್ತುಕೊಂಡು, ಮಗನ ಹಾಗೆ, ಇಕೆಮೆಫೂನಾ ಹಿಂಬಾಲಿಸುತ್ತಿದ್ದ. ಮತ್ತೆ ಇಕೆಮೆಫೂನಾ ಅವನನ್ನು ಅಪ್ಪ ಅಂತಲೂ ಕರೆದ.

o o o o o o

ಕಟಾವು ಮತ್ತು ಬಿತ್ತನೆಯ ಕಾಲದ ನಡುವಿನ ಬಿಡುವಿನ ಸಮಯದ ಅಂತ್ಯ ಭಾಗದಲ್ಲಿ ಇಕೆಮೆಫೂನಾ ಉಮೋಫಿಯಾಕ್ಕೆ ಬಂದದ್ದು. ಶಾಂತಿ ಸಪ್ತಾಹ ಪ್ರಾರಂಭವಾಗುವುದಕ್ಕೆ ಒಂದೆರಡು ದಿನಗಳಿವೆ ಎನ್ನುವ ಹಾಗೆ ಅವನು ಖಾಯಿಲೆಯಿಂದ ಗುಣವಾದದ್ದು. ಮತ್ತೆ ಅದೇ ವರ್ಷ ಒಕೊಂಕೊ ಶಾಂತಿ ಸಪ್ತಾಹವನ್ನು ಭಂಗ ಮಾಡಿದ್ದು. ಅದಕ್ಕೋಸ್ಕರವಾಗಿ ಭೂದೇವತೆಯ ಪೂಜಾರಿಯಾದ ಎಜಿಯಾನಿಯಿಂದ ಅವನಿಗೆ ದಂಡವೂ ವಿಧಿಸಲ್ಪಟ್ಟಿತು.

ಒಕೊಂಕೊವಿನ ಚಿಕ್ಕ ಹೆಂಡತಿ ಜಡೆಹೆಣೆದುಕೊಳ್ಳಲು ತನ್ನ ಗೆಳತಿಯ ಮನೆಗೆ ಹೋಗಿದ್ದವಳು ಮಧ್ಯಾಹ್ನದ ಊಟ ತಯಾರಿಸಲು ಸಮಯಕ್ಕೆ ಸರಿಯಾಗಿ ಬಾರದ ಕಾರಣ ಅವನಿಗೆ ಕೋಪವುಂಟಾಗಿತ್ತು. ಮೊದಮೊದಲು ಅವಳು ಮನೆಯಲ್ಲಿ ಇರಲಿಲ್ಲವೆಂದು ಒಕೊಂಕೊವಿಗೆ ತಿಳಿದಿರಲಿಲ್ಲ. ಅವಳ ಮನೆಯಿಂದ ಊಟದ ಬಟ್ಟಲು ಬರುವುದೆಂದು ಕಾದು ಕಾದು ಸಾಕಾಗಿ ಅವಳು ಏನು ಮಾಡುತ್ತಿದ್ದಾಳೆಂದು ತಿಳಿಯಲು

ತಾನೇ ಖುದ್ದಾಗಿ ಗುಡಿಸಿಲಿಗೆ ನಡೆದಿದ್ದ. ಮನೆಯಲ್ಲಿ ಯಾರೂ ಇರಲಿಲ್ಲ ಮತ್ತು ಒಲೆ ತಣ್ಣಗಾಗಿತ್ತು.

"ಒಜಿಯುಗೊ ಎಲ್ಲಿ?" ಆವರಣದ ಮಧ್ಯಭಾಗದಲ್ಲಿಟ್ಟಿದ್ದ ಭಾರಿ ಹಳಗೆಯಲ್ಲಿನ ನೀರು ತುಂಬಿಕೊಳ್ಳಲು ತನ್ನ ಗುಡಿಸಿಲಿನಿಂದ ಹೊರಬಂದ ಎರಡನೆಯ ಹೆಂಡತಿಯನ್ನು ಕೇಳಿದ್ದ.

"ಜಡೆ ಹೆಣೆದುಕೊಳ್ಳಲು ಹೋಗಿದ್ದಾಳೆ."

ಒಕೊಂಕೊ ತುಟಿ ಕಡಿದ, ಕೋಪ ಒಳಗೆ ಉಕ್ಕುತ್ತಿತ್ತು.

"ಮಕ್ಕಳೆಲ್ಲಿ? ಅವನ್ನು ಕರ್ಕೊಂಡು ಹೋದ್ಲಾ?" ಮಾಮೂಲಿಯಲ್ಲದ ನಿಯಂತ್ರಣದ ದನಿಯಲ್ಲಿ ಕೇಳಿದ.

"ಅವರೆಲ್ಲ ಇಲ್ಲಿದ್ದಾರೆ." ಮೊದಲನೇ ಹೆಂಡತಿ, ನೋಯೆಯ ತಾಯಿ ಉತ್ತರಿಸಿದಳು. ಬಗ್ಗಿ ಒಕೊಂಕೊ ಒಳಗೆ ಇಣುಕಿದ. ಒಜಿಯುಗೊ ಮಕ್ಕಳು ತನ್ನ ಮೊದಲನೇ ಹೆಂಡತಿ ಮಕ್ಕಳೊಂದಿಗೆ ಉಣ್ಣುತ್ತಿದ್ದರು.

"ಅವಳು ಹೋಗಕ್ಕೂ ಮೊದ್ಲು ಅವಕ್ಕೂ ಉಣ್ಣಿಕ್ಕಕ್ಕೆ ಅಂತ ಹೇಳಿದ್ಲಾ?"

"ಹೂಂ", ಒಜಿಯುಗೋಳ ಮರವೆಯ ಪರಿಣಾಮವನ್ನು ಕಡಿಮೆ ಮಾಡುವ ಉಪಾಯದಲ್ಲಿ ನೋಯೆಯ ತಾಯಿ ಸುಳ್ಳು ಹೇಳಿದಳು.

ಅವಳು ನಿಜ ಸಂಗತಿ ತಿಳಿಸುತ್ತಿಲ್ಲನೆಂದು ಒಕೊಂಕೊವಿಗೆ ಗೊತ್ತಾಯಿತು. ಒಜಿಯುಗೊ ಬರುವುದನ್ನೇ ಕಾಯುತ್ತಾ ತನ್ನ ಹಟ್ಟಿಯಲ್ಲಿ ಒಕೊಂಕೊ ಕುಳಿತ. ಅವಳು ಬಂದಾಗ ಮೈ ಬಾಸುಂಡೆ ಬರುವ ಹಾಗೆ ಅವಳನ್ನು ಹೊಡೆದ. ಅವನಿಗೆ ಹತ್ತಿದ ಕೋಪದಲ್ಲಿ ಅದು 'ಶಾಂತಿ ಸಪ್ತಾಹ'ವೆಂಬುದೂ ಕೂಡ ಮರೆತು ಹೋಗಿತ್ತು. ಅವನ ಮೊದಲನೆಯ ಇಬ್ಬರು ಹೆಂಡತಿಯರು ಭಯಗೊಂಡವರಾಗಿ ಅದು ಪವಿತ್ರ ವಾರವೆಂದು ಗೋಗರೆಯುತ್ತಾ ಅವನ ಬಳಿ ಓಡಿದರು. ಆದರೆ ಒಕೊಂಕೊ ಮಾತ್ರ ಯಾರನ್ನಾದರೂ ಹೊಡೆಯುವಾಗ ಮಧ್ಯದಲ್ಲೇ ನಿಲ್ಲಿಸುವವನಲ್ಲ, ದೇವತೆಯ ಭಯವೂ ಕೂಡ ಅವನನ್ನು ಗೆಲ್ಲುವಂತಿರಲಿಲ್ಲ.

ಒಕೊಂಕೊವಿನ ಅಜುಬಾಜುವಿನವರು ತಾವಿದ್ದಲ್ಲಿಂದಲೇ ವಿಚಾರವೇನೆಂದು ಕೂಗಿ ಕೇಳಿದರು. ತಾವೇ ಖುದ್ದಾಗಿ ಏನೆಂದು ತಿಳಿಯಲು ಕೆಲವರು ಹತ್ತಿರ ಬಂದರು. ಪವಿತ್ರವಾರದ ಕಾಲದಲ್ಲಿ ಹೊಡೆದುದನ್ನು ಕಂಡವರಿರಲಿಲ್ಲ.

ಮುಚ್ಚುಂಜೆಗೆ ಮೊದಲೇ ಭೂತಾಯಿಯಾದ ಆನಿಯ ಪೂಜಾರಿ ಎಜಿಯಾನಿ ಒಕೊಂಕೊವಿನ ಗುಡಿಸಿಲಿನ ಹತ್ತಿರ ಬಂದ. ಒಳಗೆ ಹೋಗಿ ಕೋಲಕಾಯಿಯನ್ನು ತಂದು ಒಕೊಂಕೊ ಪೂಜಾರಿಯ ಮುಂದಿಟ್ಟ.

“ನಿನ್ನ ಕೋಲಕಾಯಿಯನ್ನು ತೆಗೆದುಕೊಂಡು ಹೋಗು. ನಮ್ಮ ಹಿರೀಕರು ಮತ್ತು ದೇವತೆಗಳಿಗೆ ಗೌರವ ತೋರಿಸದ ವ್ಯಕ್ತಿಯ ಮನೆಯಲ್ಲಿ ನಾನೇನೂ ತಿನ್ನುವುದಿಲ್ಲ.”

ತನ್ನ ಹೆಂಡತಿ ಎಸಗಿರುವುದನ್ನು ಹೇಳಲು ಒಕೊಂಕೊ ಪ್ರಯತ್ನಿಸಿದನಾದರೂ ಎಜಿಯಾನಿ ಅದಕ್ಕೆ ಗಮನಕೊಡಲಿಲ್ಲ. ಕೈಯಲ್ಲಿ ಹಿಡಿದ ತುಂಡು ದೊಣ್ಣೆಯನ್ನು ನೆಲಕ್ಕೆ ಕುಟ್ಟುತ್ತಾ ತನ್ನ ಮಾತಿಗೆ ಒತ್ತುಕೊಡುತ್ತಿದ್ದ.

“ನಾನು ಹೇಳೋದು ಕೇಳು,” ಒಕೊಂಕೊ ಮಾತು ಮುಗಿಸಿದ ನಂತರ ಹೇಳಿದ. “ಉಮೋಫಿಯಾದಲ್ಲಿ ನೀನು ಹೊಸಬನೇನಲ್ಲ. ಭೂಮಿಗೆ ನಾವು ಬಿತ್ತನೆ ಬಿತ್ತುವುದಕ್ಕೆ ಮೊದಲ ಒಂದು ವಾರ ಕಾಲದಲ್ಲಿ ವ್ಯಕ್ತಿ ಯಾರೊಡನೆಯೂ ಒರಟಾಗಿ ಮಾತನಾಡಬಾರದೆಂದು ನಮ್ಮ ಹೆತ್ತವರು ನೇಮಿಸಿರುವುದು ನಿನಗೂ ಗೊತ್ತು, ನನಗೂ ಗೊತ್ತು. ನಾವು ನಮ್ಮ ನೆರೆಹೊರೆಯವರೊಂದಿಗೆ ಶಾಂತಿಯಿಂದ ಬಾಳುವುದರ ಮೂಲಕವಾಗಿ ಭೂಮಾತೆಯನ್ನು ಗೌರವಿಸುವುದು–ಅವಳ ಕಟಾಕ್ಷವಿಲ್ಲದಿದ್ದರೆ ಬೆಳೆ ಬೆಳೆಯುವುದಿಲ್ಲ. ನೀನು ಮಹಾಪರಾಧವೆಸಗಿದ್ದೀಯ.” ಹಾಗಂತ ಅಂದು ದೊಣ್ಣೆಯಿಂದ ನೆಲವನ್ನು ಗಟ್ಟಿಯಾಗಿ ಕುಟ್ಟಿದ. “ನಿನ್ನ ಹೆಂಡತಿ ತಪ್ಪು ಮಾಡಿದಳು, ಆದರೆ ನೀನು ಗುಡಿಸಿಲಿಗೆ ಬಂದ ಕಾಲದಲ್ಲಿ ಅವಳ ಮಿಂಡ ಅವಳ ಮೇಲೇರಿದ ದೃಶ್ಯವನ್ನು ನೀನು ಕಂಡಾಗಲೂ ಅವಳನ್ನು ಥಳಿಸಲಾರೆ.” ಮತ್ತೊಂದು ಬಾರಿ ದೊಣ್ಣೆಯಿಂದ ನೆಲ ಕುಟ್ಟಿದ. “ನೀನು ಮಾಡಿರುವ ಪಾಪದಿಂದ ಇಡೀ ಬುಡಕಟ್ಟಿಗೇ ಅಪಾಯವಾಗಬಹುದು. ನೀನು ಅವಮಾನ ಮಾಡಿರುವ ಭೂಮಾತೆಯು ಬೆಳೆ ಕೊಡದೆ ನಾವೆಲ್ಲಾ ಸರ್ವನಾಶವಾಗಬಹುದು.” ಅವನ ದನಿ ಈಗ ಕೋಪದಿಂದ ಆಗ್ರಹದ ಕಡೆ ತಿರುಗಿತು. “ಅನಿ ದೇವತೆಯ ಗುಡಿಗೆ ನಾಳೆ ಒಂದು ಮೇಕೆ, ಒಂದು ಕೋಳಿ, ಒಂದು ಅಳತೆ ಬಟ್ಟೆ ಮತ್ತು ಒಂದು ನೂರು ಕವಡೆ–ಇಷ್ಟು ತರಬೇಕು.” ಮೇಲೆದ್ದು ಗುಡಿಸಿಲಿನಿಂದ ಹೊರಗೆ ನಡೆದ.

ಪೂಜಾರಿ ಹೇಳಿದ ಹಾಗೆಯೇ ಒಕೊಂಕೊ ಮಾಡಿದ. ಅವನ ಜೊತೆಯಲ್ಲಿ ಒಂದು ಗಡಿಗೆ ಕಳ್ಳನ್ನೂ ತೆಗೆದುಕೊಂಡು ಹೋದ. ಅಂತರಂಗದಲ್ಲಿ ಅವನಿಗೆ ಪಶ್ಚಾತ್ತಾಪವಾಗಿತ್ತು. ಆದರೆ ಕಂಡ ಕಂಡವರ ಜೊತೆಯಲ್ಲೆಲ್ಲಾ ತಾನು ತಪ್ಪು ಮಾಡಿದೆನೆಂದು ಹೇಳಿಕೊಳ್ಳುವ ಸ್ವಭಾವದವನಲ್ಲ ಅವನು. ಹಾಗಾಗಿ ಬುಡಕಟ್ಟಿನ ದೇವತೆಗಳ ಬಗ್ಗೆ ಅವನಿಗೆ ಗೌರವವಿಲ್ಲವೆಂದು ಜನರು ಅಂದರು. ಅವನ ಅದೃಷ್ಟ ಅವನ ತಲೆಗೇರಿದೆಯೆಂದು ಅವನ ಶತ್ರುಗಳು ಹೇಳಿದರು. ಹೊಟ್ಟೆಬಿರಿಯ ಉಂಡ ನಂತರ ತನ್ನ ‘ಚಿ’ಯನ್ನೇ ಪ್ರಟ್ಟ ‘ನಿಜ’ ಹಕ್ಕಿ ತರಹ ಅವನು ಅಂದರು.

ಶಾಂತಿ ಸಪ್ತಾಹದ ಕಾಲದಲ್ಲಿ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಜನರು ತಮ್ಮ ನೆರೆಹೊರೆಯವರ ಒಡಗೂಡಿ ಕಳ್ಳು ಕುಡಿಯುತ್ತಿದ್ದರು. ಈ ವರ್ಷ ಒಂಕೊಕೊ ಎಸಗಿದ್ದ 'ನಿಸೊ–ಅನಿ ಪಾಪವನ್ನು ಬಿಟ್ಟು ಅವರು ಬೇರೆ ಏನೂ ಮಾತನಾಡಲಿಲ್ಲ. ಅನೇಕ ವರ್ಷಗಳ ನಂತರ ವ್ಯಕ್ತಿಯೊಬ್ಬ ಶಾಂತಿ ಸಪ್ತಾಹಕ್ಕೆ ಭಂಗ ತಂದಿದ್ದ. ಹಣ್ಣು ಹಣ್ಣು ಮುದುಕರೂ ಕೂಡ ಭೂತಕಾಲದಲ್ಲೆಲ್ಲೋ ಒಮ್ಮೆ ಹಾಗಾಗಿತ್ತೆಂದು ಅಸ್ಪಷ್ಟವಾಗಿ ನೆನಪಿಸಿಕೊಳ್ಳುತ್ತಿದ್ದರು.

ಆ ಗ್ರಾಮದಲ್ಲೇ ಅತ್ಯಂತ ಹಿರಿಯನಾದ ಒಗ್‌ಬಾಫು ಎಜಿಯುಡು ಅವನನ್ನು ಭೇಟಿಯಾಗಲು ಬಂದ ಇಬ್ಬರ ಜೊತೆ ಶಾಂತಿ ಸಪ್ತಾಹವನ್ನು ಭಂಗಗೊಳಿಸಿದವರಿಗೆ ತಮ್ಮ ಬುಡಕಟ್ಟಿನಲ್ಲಿ ವಿಧಿಸುವ ದಂಡ ಬಹಳ ಕಡಿಮೆಯಾಗುತ್ತಾ ಬಂದಿದೆ ಎಂದು ಹೇಳುತ್ತಿದ್ದ.

"ಮೊದಲು ಹಾಗಿರಲಿಲ್ಲ," ಅವನೆಂದ. "ನಮ್ಮಪ್ಪ ಹೇಳ್ತಿದ್ದ, ಶಾಂತಿ ಸಪ್ತಾಹ ಭಂಗ ಮಾಡಿದವನನ್ನು ಅವನು ಸಾಯುವವರೆಗೆ ಬೀದಿಯುದ್ದಕ್ಕೂ ಊಟೆ ಎಳೆಯುತ್ತಿದ್ದರೆಂದು ಅವನಿಗೆ ಹೇಳುತ್ತಿದ್ದರಂತೆ. ಯಾವ ಶಾಂತಿಯನ್ನು ಅದು ಕಾಪಾಡಬೇಕಾಗಿತ್ತೋ ಅದನ್ನೇ ಕೆಡಿಸಿದುದರಿಂದ ಸ್ವಲ್ಪ ಸಮಯದ ನಂತರ ಆ ಪದ್ಧತಿಯನ್ನು ಅವರು ಕೈಬಿಟ್ಟರು."

"ನಿನ್ನೆ ಯಾರೋ ನನಗೆ ಹೇಳಿದರು," ಅವರಲ್ಲಿ ಸ್ವಲ್ಪ ಎಳೆ ಪ್ರಾಯದವನು ಹೇಳಿದ. "ಕೆಲವು ಬುಡಕಟ್ಟುಗಳಲ್ಲಿ ಶಾಂತಿ ಸಪ್ತಾಹದ ಕಾಲದಲ್ಲಿ ಸಾಯುವುದು ತುಂಬಾ ಅನಿಷ್ಟವಂತೆ."

"ಅದು ನಿಜವಾದ ಮಾತು," ಒಗ್‌ಬಾಫು ಎಜಿಯುಡು ಅಂದ. "ಒಬೊಡೋನಿಯಲ್ಲಿ ಆ ಪದ್ಧತಿ ಇದೆ. ಇಂಥ ಕಾಲದಲ್ಲಿ ಒಬ್ಬ ವ್ಯಕ್ತಿ ಸತ್ತರೆ ಅವನನ್ನು ಅವರು ಹೂಳುವುದಿಲ್ಲ, ಬದಲಾಗಿ ಕೇಡಿನ ಕಾಡಿಗೆ ಒಗೆದು ಬಿಡುತ್ತಾರೆ. ಈ ಜನರಿಗೆ ಅರಿವಿಲ್ಲದ ಕಾರಣ ಈ ಕೆಟ್ಟ ಪದ್ಧತಿಯನ್ನು ಇವರು ಪರಿಪಾಲಿಸುತ್ತಿದ್ದಾರೆ. ಅಸಂಖ್ಯಾತ ಗಂಡಸರು ಮತ್ತು ಹೆಂಗಸರನ್ನು ಇವರು ಹೂಳದೆ ಎಸೆದುಬಿಡುತ್ತಾರೆ. ಅದರ ಪರಿಣಾಮವಾದರೂ ಏನು? ಬದುಕಿರುವವರಿಗೆ ಕಿರುಕುಳ ಕೊಡಲು ನೂರಾರು ಪ್ರೇತಗಳು ಅವರ ಜನಾಂಗದಲ್ಲಿ ಓಡಾಡತೊಡಗುತ್ತವೆ.

o o o o o o

ಶಾಂತಿ ಸಪ್ತಾಹದ ನಂತರ ಪ್ರತಿಯೊಂದು ಮನೆಯವರೂ ಹೊಸದಾಗಿ ಜಮೀನು ಮಾಡುವ ಸಲುವಾಗಿ ಪೊದೆ ಸವರಲು ತೊಡಗುತ್ತಾರೆ. ಸವರಿದ ಪೊದೆಗಳನ್ನು ಚೆನ್ನಾಗಿ ಒಣಗಲು ಬಿಟ್ಟು ನಂತರ ಬೆಂಕಿ ಇಡುತ್ತಾರೆ. ಉರಿಯು ಜ್ವಾಲೆ ಮುಗಿಲು

ಮಟ್ಟು ವಾಗ ನಾನಾ ದಿಕ್ಕುಗಳಿಂದ ಬಂದ ಡೇಗೆಗಳು ಗಾಢ ಮೌನದಲ್ಲಿ ಉರಿಯುವ ಬಯಲಿನ ಮೇಲೆ ಗಸ್ತು ತಿರುಗುತ್ತವೆ. ಮಳೆಗಾಲ ಸಮೀಪಿಸುತ್ತಿದ್ದಂತೆಯೇ ಮತ್ತೊಂದು ಬೇಸಗೆ ಬರುವವರೆಗೆ ಅವು ಮಾಯವಾಗುತ್ತವೆ.

ಒಕೊಂಕೊ ಮುಂದಿನ ಕೆಲವು ದಿನಗಳನ್ನು ಸುವರ್ಣಗಡ್ಡೆಯ ಬಿತ್ತನೆ ಬೀಜ ನೇರ್ಪುಗೊಳಿಸುವುದರಲ್ಲಿ ಕಳೆದ. ಬಿತ್ತನೆಗೆ ಯೋಗ್ಯವೇ ಇಲ್ಲವೇ ಎಂದು ಪ್ರತಿಯೊಂದು ಗಡ್ಡೆಯನ್ನು ಚೆನ್ನಾಗಿ ಪರೀಕ್ಷಿಸುತ್ತಿದ್ದ. ಒಂದು ಬೀಜವಾಗಿ ಬಿತ್ತಲು ಗಡ್ಡೆಯೊಂದು ದೊಡ್ಡದೆಂದು ಕಂಡರೆ ತನ್ನ ಹರಿತವಾದ ಚಾಕುವಿನಿಂದ ಅದನ್ನು ಉದ್ದುದ್ದವಾಗಿ ಸೀಳಿ ಹೋಳು ಮಾಡಿ ಎರಡು ಬೀಜವಾಗಿ ಮಾಡುತ್ತಿದ್ದ. ಅವನ ದೊಡ್ಡ ಮಗ ನೋಯೆ ಮತ್ತು ಇಕೆಮೆಫ್ಯೂನಾ ಬಣವೆಯಿಂದ ಗಡ್ಡೆಗಳನ್ನು ಮುಕ್ಕರಿಯಲ್ಲಿ ಹೊತ್ತು ತಂದು ತಯಾರಾದ ಬೀಜಗಳನ್ನು ನಾನೂರಕ್ಕೆ ಒಂದು ಗುಡ್ಡೆಯಂತೆ ಮಾಡುವರು. ಕೆಲವು ಬಾರಿ ಅವರೇ ತಯಾರಿಸಲು ಒಂದೆರಡು ಗಡ್ಡೆಗಳನ್ನು ಕೊಡುವನು. ಆದರೆ ಅವರ ಪ್ರಯತ್ನದಲ್ಲಿ ಅವನಿಗೆ ದೋಷ ಕಾಣುತ್ತಿತ್ತು. ಆ ಕಾರಣದಿಂದ ಅವರನ್ನು ಬಹಳ ವಾಗಿ ಗದರಿಕೊಳ್ಳುವನು.

“ಇದೇನು ಅಡುಗೆಗೆ ಗಡ್ಡೆ ಸೀಳ್ತಿದೀಯಾ ಹೇಗೆ?” ಅಂತ ನೋಯೆಯನ್ನು ಕೇಳಿದ. “ಇನ್ನೊಂದು ಸಲ ನೀನು ಇಷ್ಟು ಗಾತ್ರಕ್ಕೆ ಸೀಳಿದ್ರೆ ನಿನ್ನ ದವಡೆ ಒಡಿತೀನಿ. ಇನ್ನೂ ನೀನು ಮಗು ಅಂದ್ಕೊಂಡಿದೀಯಾ. ನಿನ್ನ ವಯಸ್ಸಿನಲ್ಲಿ ನಾನು ಹೊಲ ಮಾಡಕ್ಕೆ ಶುರು ಮಾಡಿದ್ದೆ. ಆಮೇಲೆ ನೀನು,” ಇಕೆಮೆಫ್ಯೂನಾಗೆ ಹೇಳಿದ, “ನಿಮ್ಮೂರಲ್ಲಿ ಸುವರ್ಣಗಡ್ಡೆ ಬೆಳೀತಾರೊ ಇಲ್ವೊ?”

ಬಿತ್ತನೆಗೆ ಗಡ್ಡೆಗಳನ್ನು ತಯಾರಿಸುವ ಕಷ್ಟದ ಕತೆಯನ್ನು ಅರ್ಥಮಾಡಿಕೊಳ್ಳಲು ಹುಡುಗರು ಇನ್ನೂ ಚಿಕ್ಕವರು ಎಂದು ಅಂತರ್ಯದಲ್ಲಿ ಒಕೊಂಕೊವಿಗೆ ಗೊತ್ತಿತ್ತು. ಆದರೂ ಕೆಲಸ ಕಲಿಯಲು ಚಿಕ್ಕ ವಯಸ್ಸು ಅಡ್ಡಿಬಾರದೆಂದು ಆಲೋಚಿಸಿದ. ಸುವರ್ಣಗಡ್ಡೆ ವ್ಯಕ್ತಿಯ ಗಂಡಸುತನದ ಪ್ರತೀಕ; ಒಂದು ಕಟಾವಿನಿಂದ ಇನ್ನೊಂದು ಕಟಾವಿನವರೆಗೆ ಒಬ್ಬ ಮನುಷ್ಯ ತನ್ನ ಕುಟುಂಬವನ್ನು ಕಾಪಾಡಬಲ್ಲನಾದರೆ ಅವನೇ ನಿಜವಾಗಿ ದೊಡ್ಡ ಮನುಷ್ಯ. ತನ್ನ ಮಗ ದೊಡ್ಡ ರೈತ ಮತ್ತು ದೊಡ್ಡ ಮನುಷ್ಯನಾಗಬೇಕೆಂದು ಒಕೊಂಕೊ ಬಯಸಿದ್ದ. ನೋಯೆಯಲ್ಲಿ ಆಗಲೇ ಕಾಣಿಸಿಕೊಂಡಿದ್ದ ದಿಗಿಲು ಹುಟ್ಟಿಸುವ ಆಲಸ್ಯದ ಗುರುತುಗಳನ್ನು ತೊಡೆದು ಹಾಕಬೇಕಾಗಿತ್ತು.

“ಬುಡಕಟ್ಟಿನವರ ಗುಂಪಿನಲ್ಲಿ ತಲೆಯೆತ್ತಿ ಬಾಳದ ಮಗ ನನಗೆ ಬ್ಯಾಡ. ಅಂಥ ಮಗ ನನ್ನವನಾದ್ರೆ ನಾನೇ ಕಯ್ಯಾರ ಅವನ ಕತ್ತು ಹಿಚುಕುವೆ. ನೀನು ಹಾಗೇ ದುರುಗುಟ್ಟಿ ನೋಡ್ತಾ ನಿಂತ್ರೆ,” ಒಕೊಂಕೊ ಆಣೆ ಹಾಕಿದ, “ಅಮಡಿಯೋರಾ ದೇವತೆ ನಿನ್ನ ತಲೆ ಚೂರು ಮಾಡ್ತಾನ!”

ಕೆಲವು ದಿನಗಳ ನಂತರ ಬಿದ್ದ ಒಂದೆರಡು ಜೋರು ಮಳೆಯಿಂದ ನೆಲ ಒದ್ದೆಯಾದ ಬಳಿಕ ಒಕೊಂಕೊ ಮತ್ತು ಅವನ ಮನೆಯವರು ಬೀಜ ತುಂಬಿದ ಮಕ್ಕರಿಗಳನ್ನು ಹೊತ್ತು ಗುದ್ದಲಿ ಪಿಕಾಸಿ ಹಿಡಿದು ಹೊಲಕ್ಕೆ ನಡೆದರು–ಬಿತ್ತನೆ ಶುರುವಾಯಿತು. ಹೊಲದ ತುಂಬೆಲ್ಲ ಸಾಲು ಸಾಲಾಗಿ ಮಣ್ಣಿನಗುಪ್ಪೆ ಮಾಡಿ ಅದರಲ್ಲಿ ಸುವರ್ಣಗಡ್ಡೆಯನ್ನು ನೆಟ್ಟರು.

ಬೀಜಗಳಲ್ಲೆಲ್ಲಾ ಸುವರ್ಣಗಡ್ಡೆ ರಾಜ–ಭಾರಿ ಕೆಲಸ ತೆಗೆಯುವ ರಾಜ. ಎರಡು ಮೂರು ಹುಣ್ಣಿಮೆಯವರೆಗೆ ಕೋಳಿ ಕೂಗುವ ಹೊತ್ತಿನಿಂದ ಕೋಳಿಮರಿಗಳು ಗೂಡು ಸೇರುವವರೆಗೆ ಶ್ರಮದ ದುಡಿಮೆ ಮತ್ತು ಎಚ್ಚರಿಕೆಯ ಪಾಲನೆ ಮಾಡಬೇಕಾಗಿತ್ತು. ಕುಡಿಯೊಡೆದ ಗಡ್ಡೆಗಳನ್ನು ಭೂಮಿಯ ಕಾವಿನಿಂದ ರಕ್ಷಿಸಲು ಸುಜ್ಜಲು ಸೊಪ್ಪಿನ ಮರೆ ಕಟ್ಟಬೇಕಾಗಿತ್ತು. ಮಳೆ ಹೆಚ್ಚಾದಂತೆ ಹೆಂಗಸರು ಮೆಕ್ಕೆ ಜೋಳ, ಕಲ್ಲಂಗಡಿ ಮತ್ತು ಹುರುಳಿ ಬೀಜ ಬಿತ್ತಿದರು. ಆ ನಂತರ ಸುವರ್ಣಗಡ್ಡೆಗಳ ಪಕ್ಕದಲ್ಲಿ ಮೊದಮೊದಲು ಸಣ್ಣ ಕಡ್ಡಿಗಳನ್ನೂ ಕ್ರಮೇಣ ಮರದ ದಪ್ಪ ದಪ್ಪ ಕೊಂಬೆಗಳನ್ನೂ ನೆಟ್ಟರು. ಸುವರ್ಣಗಡ್ಡೆ ಬೆಳೆಯುವ ಒಂದು ಅವಧಿಯಲ್ಲಿ ಮೂರು [illegible] ಕಾಲಕ್ಕ ಹೆಂಗಸರು ಕಳೆ ತೆಗೆಯುತ್ತಿದ್ದರು.

ಈಗ ಮಳೆ ಸುರಿದೇ ಸುರಿಯಿತು–ಎಷ್ಟು ಜೋರಾಗಿ ಬೀಳತೊಡಗಿತೆಂದರೆ ಗ್ರಾಮದ ಮಳೆ ಬರಿಸುವವನೂ ಕೂಡ ಮಧ್ಯ ಪ್ರವೇಶಿಸುವಂತಿರಲಿಲ್ಲ. ಬರಗಾಲದಲ್ಲಿ ಮಳೆ ತರಿಸುವುದು ಹೇಗೆ ಸಾಧ್ಯವಿರಲಿಲ್ಲವೋ ಹಾಗೆ ಈ ತನ್ನ ಆರೋಗ್ಯಕ್ಕೆ ಹಾನಿ ಮಾಡಿಕೊಳ್ಳದೆ ಅವನ ಕೈಯಲ್ಲಿ ಮಳೆ ನಿಲ್ಲಿಸಲೂ ಸಾಧ್ಯವಾಗಲಿಲ್ಲ. ಹವಾಗುಣದ ಈ ಬಗೆಯ ವಿಪರೀತ ಬಲಗಳನ್ನು ನಿಯಂತ್ರಿಸಲು ಸಾಧ್ಯವಾಗುವಂಥ ಚೈತನ್ಯ ಮನುಷ್ಯ ಮಾತ್ರದವನಿಗೆ ಬಹಳ ಕಷ್ಟದ್ದಾಗಿತ್ತು.

ಹಾಗಾಗಿ ಮಳೆಗಾಲದ ಮಧ್ಯಭಾಗದಲ್ಲಿ ನಿಸರ್ಗಕ್ಕೆ ಯಾರೂ ಅಡ್ಡಿಪಡಿಸಿರಲಿಲ್ಲ. ಕೆಲವು ಬಾರಿ ಬೂದಿ ಬಣ್ಣದ ಜಲಜಾಲದಲ್ಲಿ ಮಳೆ ಭೂಮಿ ಆಕಾಶವನ್ನು ಒಂದು ಮಾಡಿತ್ತು. ಅಂಥ ಸಂದರ್ಭದಲ್ಲಿ ಅಮೇಡಿಯೊರಾ ದೇವತೆಯ ಗುಡುಗು ಆಕಾಶದಿಂದ ಬರುತ್ತಿತ್ತೋ ಅಥವಾ ಪಾತಾಳದಿಂದಲೋ ಹೇಳಲು ಬರುತ್ತಿರಲಿಲ್ಲ. ಆವಾಗ ಸಾಮಾನ್ಯವಾಗಿ ಉಮೋಫಿಯಾದ ಮಕ್ಕಳು ತಮ್ಮ ತಮ್ಮ ತಾಯಂದಿರ ಅಡುಗೆ ಒಲೆಯ ಬಳಿ ಕುಳಿತು ಕತೆ ಹೇಳುವರು, ಇಲ್ಲವೇ ತಂದೆಯ ಗುಡಿಸಿಲಿನಲ್ಲಿ ಕುಳಿತು ಬೆಂಕಿಯಲ್ಲಿ ಮೆಕ್ಕೆ ಜೋಳ ಸುಟ್ಟು ತಿನ್ನುತ್ತಾ ಕೈಕಾಸಿಕೊಳ್ಳುವರು. ಬಹಳ ಶ್ರಮದ ದುಡಿಮೆ ಬೇಡುವ ಬಿತ್ತನೆ ಕಾಲ ಮತ್ತು ಅಷ್ಟೇ ಶ್ರಮದ ದುಡಿಮೆಯ ಆದರೆ ಸ್ವಲ್ಪ ಸರಸದ ಕಟಾವಿನ ಕಾಲದ ಮಧ್ಯ ಬರುವ ಸಂಕ್ಷಿಪ್ತವಾದ ವಿರಾಮದ ಸಮಯ ಅದು.

ಇಕೆಮೆಫೂನಾನಿಗೆ ತಾನು ಒಕೊಂಕೊ ಮನೆಯ ಒಬ್ಬ ಸದಸ್ಯನಾಗಿ ಹೋದ ಅನುಭವವಾಗಿತ್ತು. ಇನ್ನೂ ಕೂಡ ಅವನಿಗೆ ತನ್ನ ತಾಯಿ ಮತ್ತು ಮೂರು ವರ್ಷದ ತಂಗಿಯ ನೆನಪು ಆಗಾಗ ಕಾಡುತ್ತಿದ್ದುದರಿಂದ ದುಃಖ ಮತ್ತು ವ್ಯಾಕುಲದ ಕ್ಷಣಗಳು ಅವನನ್ನು ಬಾಧಿಸುತ್ತಿದ್ದವು. ಆದರೆ ಅವನ ಮತ್ತು ನೋಯೆಯ ಗೆಳೆತನ ಗಾಢವಾಗಿದ್ದರಿಂದ ಅಂಥ ಕ್ಷಣಗಳು ಮತ್ತು ಅವುಗಳ ತೀವ್ರತೆ ಕಡಿಮೆಯಾಗುತ್ತಾ ಬಂದಿತು. ಇಕೆಮೆಫೂನಾ ಬಳಿ ಮುಗಿಯಲಾರದಷ್ಟು ಜನಪದ ಕತೆಗಳಿದ್ದವು. ನೋಯೆಗೆ ಗೊತ್ತಿದ್ದ ಕತೆಗಳೂ ಸಹ ಬೇರೊಂದು ಬುಡಕಟ್ಟಿನ ಧ್ವನಿಯನ್ನು ಹೊಂದಿ ನೂತನವಾಗಿ ಕೇಳಿಸುತ್ತಿದ್ದವು. ತನ್ನ ಬದುಕಿನ ಕೊನೆಯವರೆಗೂ ನೋಯೆ ಈ ಘಟ್ಟದ ಅನುಭವವನ್ನು ಚೆನ್ನಾಗಿ ನೆನಪಿಸಿಕೊಳ್ಳುತ್ತಿದ್ದ. ಕೇವಲ ಕೆಲವೇ ಕೆಲವು ಕಾಳುಗಳನ್ನು ಹೊಂದಿದ ತೆನೆಯನ್ನು ನೋಡಿ ಇಕೆಮೆಫೂನಾ 'ಇಚೆ–ಉಗಾಡಿ ನ್ವಾಯಿ,' ಅಥವಾ ಮುದುಕಿಯ ಹಲ್ಲು ಎಂದು ಕರೆದಾಗ ನೋಯೆ ಜೋರಾಗಿ ನಕ್ಕಿದ್ದೂ ಅವನಿಗೆ ನೆನಪಾಗುತ್ತಿತ್ತು. ಕೂಡಲೇ ನೋಯೆಯ ಮನಸ್ಸು ಉಡಾಳ ಮರದ ಹತ್ತಿರ ವಾಸವಾಗಿದ್ದ ನ್ವಾಯಿಕೆ ಮುದುಕಿಯ ಕಡೆ ಹರಿಯಿತು. ಬಾಯಲ್ಲಿ ಸುಮಾರು ಮೂರು ಹಲ್ಲುಗಳನ್ನು ಹೊಂದಿದ್ದ ಆಕೆ ಎಡೆಬಿಡದೆ ತಂಬಾಕು ಸೇದುತ್ತಿದ್ದಳು.

ಕ್ರಮೇಣವಾಗಿ ಮಳೆ ಕಡಿಮೆಯಾಗಿ, ಭೂಮಿ ಮತ್ತು ಬಾನು ಮತ್ತೆ ಬೇರೆ ಬೇರೆ ಆದವು. ತಂಗಾಳಿ ಮತ್ತು ಮಂದವಾದ ಸೂರ್ಯನ ಬೆಳಕಿನಲ್ಲಿ ಮಳೆ ತೆಳುವಾದ ತುಂತುರಿನೋಪಾದಿಯಲ್ಲಿ ಓರೆಯಾಗಿ ಬೀಳತೊಡಗಿತು. ಮಕ್ಕಳು ಮನೆಯೊಳಗೆ ಉಳಿಯದೆ ಹಾಡುತ್ತಾ ಹೊರಗೆ ಓಡಾಡಲಾರಂಭಿಸಿದರು.

"ಮಳೆ ಹುಯ್ಯುತಿದೆ, ದಿನ ಬೆಳಗುತಿದೆ
ನಿನಾದಿ ಒಬ್ಬಳೆ ಅಟ್ಟು ಉಣ್ಣುತಲಿದ್ದಾಳೆ."

ಈ ನಿನಾದಿ ಯಾರು ಮತ್ತು ಏಕೆ ಅವಳು ಒಬ್ಬಳೇ ಅಡುಗೆ ಮಾಡಿಕೊಂಡು ಉಣ್ಣುತ್ತಾಳೆ ಎಂದು ನೋಯೆಗೆ ಆಶ್ಚರ್ಯವಾಯಿತು. ಕಡೆಗೆ ಇರುವೆ ದರ್ಬಾರು ಮಾಡುತ್ತಾ ಮರಳು ನಿರಂತರವಾಗಿ ನೃತ್ಯ ಮಾಡುವ ಇಕೆಮೆಫೂನಾನ ಅಚ್ಚುಮೆಚ್ಚಿನ ಕತೆಗಳಲ್ಲಿ ಬರುವ ಪ್ರದೇಶದಲ್ಲಿ ನಿನಾದಿ ಬದುಕುತ್ತಿರಬೇಕೆಂದು ನೋಯೆ ತೀರ್ಮಾನಿಸಿದ.

[ಮುಂದುವರಿಯುವುದು]

# ದಾಖಲಿಸದ ಇತಿಹಾಸ

ಆ ದಿನ
ರಾಮ ಹೊರಿಸಿದ ಬಸುರು ಹೊತ್ತು
ಕಳಂಕಿನಿಯಾಗಿ ನಡೆದ ದಿನ
ಅಯೋಧ್ಯೆ ಹೆದು
ಬಾಯಿ ಮುಚ್ಚಿದ ದಿನ
ಕಣ್ಣೀರ ಮಳೆಗರೆದು
ಮೈ ತೊಳೆದ ಜನ ಬೇಲಿ ಹೊಲಮೇಯ್ದದ್ದು ಕಂಡು
ಹೌ ಹಾರಿದರು! ನಮಗೇನು ಮುಂದೆ?
ಸೀತೆಯಡವಿಗಟ್ಟಿದ ರಾಜ
ಜಲದಾಳ ತೋರಿಹನೆ?
ಅರಮನೆಗಿಂತ ಅಡವಿ
ಹಿತ ಕಂಡಿರಬೇಕು ಮೃಗಗಳ ಸಖ್ಯ
ಸೀತೆ ನಡೆದಿದ್ದಳು ಸೋತು
ಮುಂದೆ ಲಕ್ಷ್ಮಣ
ಏನು ಭಯಂಕರ ಕ್ಷಣ!
ಬಿಲ್ಲೇರಿಸಿದ ರಾಮು ಧ್ವನಿ ಠೇಂಕರಿಸಿತ್ತು
ಸ್ತ್ರೀ ಕುಲದೆದೆಗೆ ಬಡಿದ ಬಾಣ
ನೆತ್ತರೀಸದ ಶಬ್ದವೇಧಿ
ದಿಕ್ಕಾರದ ಮೌನ
ದಾಖಲಿಸದ ಇತಿಹಾಸದ ಮಣ್ಣಡಿ ಸಿಕ್ಕಿ
ಮೊಳಕೆಯಾಗಿತ್ತು ರಾಮ ರಾಜ್ಯ

— ತಾ. ಸಿ. ತಿಮ್ಮಯ್ಯ

●

---

ತಾ. ಸಿ. ತಿಮ್ಮಯ್ಯ, ಶಿಕ್ಷಕರು, ವಿಧಾತ ವಿದ್ಯಾಲಯ, ಆನೇಕಲ್-562 106

# ಪ್ರೀತಿ ಅಂತೀರಲ್ಲ – ಅದು

ಪ್ರೀತಿ ಅಂತೀರಲ್ಲ ಅದು
ಬರೀ ಹುಚ್ಚಾಟವಲ್ಲ, ಸಿನಿಮಾ
ದಲ್ಲಿ ನಾಯಕ ನಾಯಕಿಯರು ಮುದ್ದಾಡುವುದಲ್ಲ
ಚಿಗುರು ಮೀಸೆಯ ಹುಡುಗ ಹದಿನಾರರ ಹುಡುಗಿ–
–ಯೊಂದಿಗೆ ಮಾತಾಡುವುದು....ಚಿತ್ರದಲಿ
ಅರೆನಗ್ನ ಯುವತಿಯ ಕಂಡು ಜನ ಹಲ್ಕಿರಿಯುವುದು
ಕಾಲೇಜು ಹುಡುಗಿಯರೆಡೆಗೇ ನೋಡುತ್ತಾ ಹುಡುಗರು ನಿಲ್ಲುವುದು
ಅಧಿಕಾರಿ ತನ್ನ "ಸ್ಟೆನೊ"ಗೊಂದು ಮುತ್ತಿಡುವುದು
–ಇದ್ಯಾವುದೂ ಕೂಡ ಪ್ರೀತಿಯೋ ಅಲ್ಲ.

ಪ್ರೀತಿ ಅಂತಾರಲ್ಲ ಅದು–
ಎದುರಾದ ಗುರುವಿಗೆ ನಕ್ಕು ಕೈ ಜೋಡಿಸುತ
ಹಿಂದೆಯೇ ಜರಿಯುವುದು ಪ್ರೀತಿಯಲ್ಲ
ಗಿಡದ ಹೂ ಕಿತ್ತು ಹುಡುಗ ಪ್ರಿಯತಮೆಗೆ ನೀಡುವುದು
ಕಾಲ ಕಳೆಯಲಿಕ್ಕೆ, ಪ್ರೀತಿಯ ನಾಟಕವನಾಡುವುದು
ದಿನಕ್ಕೊಂದು ಹುಡುಗಿಯ (ಗನ) ಜೊತೆಗೆ ಸುತ್ತಾಡುವುದು
ಭ್ರಷ್ಟ ರಾಜಕಾರಣಿಗಳು ಚುನಾವಣೆ ವೇಳೆಯಲಿ
ಓಟಿಗಾಗಿ ಕೈ ಮುಗಿದು ನಕ್ಕು ಮಾತಾಡುವುದು
– ಇದ್ಯಾವುದೂ ಕೂಡ ಪ್ರೀತಿಯೋ ಅಲ್ಲ.

ಪ್ರೀತಿ ಅನ್ನೋದು–
ಅಳುವ ಕಂದನನೆತ್ತಿ ತಾಯಿ ಮುದ್ದಾಡುವುದು
ನೊಂದ ಜನಕೊಂದೆರಡು ಧೈರ್ಯದ ಮಾತೇಳುವುದು
ಗೂಡ ಮರಿಗಾಹಾರ ತಂದು ತಾಯಿ ಹಕ್ಕಿ ತಿನ್ನಿಸುವುದು
ನೊಂದ ಪ್ರೇಮಿಯ ಕಂಡು ಹುಡುಗಿ (ಗ) ಸಂತೈಸುವುದು
ಬಾನ ಚಂದ್ರನ ಕಂಡು ಮಗು ಕಿಲಕಿಲನೆ ನಕ್ಕು ನಲಿಯುವುದು
ಕೆಲಸ ಮುಗಿಸಿದ ರೈತ ಹಸುಗಳ ತಲೆಯ ನೇವರಿಸುವುದು
ಇದಿಷ್ಟೇ ವಿನಃ ಇನ್ನೇನೂ ಅಲ್ಲ.

— ಎ. ಆರ್. ಮಣಿಕಾಂತ್

ಎ. ಆರ್. ಮಣಿಕಾಂತ್. S/o. ರಾಮಯ್ಯ
ಆಯಿತನಹಳ್ಳಿ ಗ್ರಾಮ. ತಟ್ಟೇಕೆರೆ ಅಂಚೆ. ನಾಗಮಂಗಲ ತಾಲ್ಲೂಕ್. ಮಂಡ್ಯ ಜಿಲ್ಲೆ

# ಹಕ್ಕಿಗಳನ್ನ, ಕನಸುಗಳನ್ನ, ನೋಡುವುದನ್ನ....

ಇಲ್ಲಿ
ನಾನು ಅಥವ ನೀನು
ಹೀಗೆ ಮಾತನಾಡಬೇಕು, ಎಂದೇನಿಲ್ಲ
ಹಾಗಾದರೆ: ನೀನೇಕೆ ಹಾಗೆ ಇದ್ದೀಯ
ಒಂದು ರೀತಿಯಲ್ಲಿ ನಿನಗಿಂತ
ನನ್ನ ಸ್ಥಿತಿ ಇನ್ನಷ್ಟು ಇಳಿದು ಹೋಗಿದೆ
ಎನ್ನುವ ಪರಿಜ್ಞಾನ ಕೂಡ ಈ ಲೋಕಕೆಲ್ಲಿ

ಅವರೆಲ್ಲ ಹಾಗೇ ಬಿಡು
ಹಾಗಂತ ರಸ್ತೆಯಲ್ಲಿ ಕೈ ಹಿಡಿದು
ನಡೆಯುತ್ತಿದ್ದಾಗ, ಯಾರೋ ಬಂದರೆಂದು
ಕೈ ಬಿಡಿಸಿಕೊಂಡಿದ್ದೇಕೆ?
ಆ ಯಾರೋ....ನಮ್ಮವರೇ
ಈ ನಮ್ಮವರೇ ನಮ್ಮ ನೋಡಬಾರದೇಕೆ?
ನೀನು ನನ್ನ ಕೈ ಬಿಟ್ಟದ್ದು ಅವರ ಕಣ್ಣು
ನಿನ್ನ ಚರ್ಮಕ್ಕೆ ಸೋತಿದ್ದು ನೀನೆ
ಆ ಯಾರೋ... ಆಗಿದ್ದು
ನಿನಗೆ ಎಂದೂ ಹೀಗೆ ಅನ್ನಿಸಲಿಲ್ಲವೆ
ಪ್ರಾಣಿಗಳಂತೆ ಮಲಗಿನವರ ನೋಡಬೇಕೆಂದು
ಹಾಗೇ

ನೀನು ನಿನ್ನ ಹಣೆಯ ಬೆವರನ್ನ
ಕೈ ವಸ್ತ್ರದಿಂದ ಅಲ್ಲ, ಕೈ ಬೆರಳಲ್ಲ ವರಸಿನೋಡು
ಅದು ನಿನ್ನದೆ ಒಳಗಿಂದ ಬಂದಿದ್ದು
ಹಾಗೇ ಅಲ್ಲವೆ ನಾವೆಲ್ಲ
ಅವರೆಲ್ಲಾ ಹಾಗಂದುಕೊಳ್ಳುವುದಿಲ್ಲ ಎನ್ನುತ್ತೀಯ
ತಪ್ಪು

ಸುಬ್ಬು ಹೊಳೆಯಾರ್ (ಹೆಚ್. ಕೆ. ಸುಬ್ಬಯ್ಯ). ಪಿ. & ಡಬ್ಲ್ಯು. ಅಸಿಸ್ಟೆಂಟ್
ದೂರದರ್ಶನ ಕೇಂದ್ರ, ಜೆ. ಸಿ. ನಗರ, ಬೆಂಗಳೂರು-6

ಅವರೆಂದೂ ಕೊಳ್ಳುತ್ತಾರೆಂದು
ನಾವೆಂದೂ ಕೊಳ್ಳಬೇಕು ಇಲ್ಲ
ವೆಂದರೆ ನಿನ್ನ ಕಣ್ಣು
ಅವರ ಮನಸ್ಸಲ್ಲಿ ತುಳಿದು ಹೋಗುತ್ತದೆ
ನಾನು ನಡುಗಿ ಹೋಗುತ್ತೇನೆ
ನಾವೆಲ್ಲ ಹೀಗೆ
ಹಕ್ಕಿಗಳನ್ನ ಕನಸುಗಳನ್ನ ನೋಡುವುದನ್ನ....
ಹತ್ತಿಕ್ಕಿಕೊಳ್ಳಬಾರದು ಹುಲ್ಲಿನ ಕಣ
ಕಣ ಸೇರಿಸಿ ಒಂದು ಬೆಚ್ಚಗಿನ ಗೂಡು ಕಟ್ಟಿಕೊಳ್ಳಬೇಕು
ಆಗ ವಾಸಿಸುವ ಉಸಿರಾಟ ಕೂಡ ಎಲ್ಲರದಾಗಿರುತ್ತವ
ಪರಿಶುದ್ಧವಾಗಿರುತ್ತವ

— ಸುಬ್ಬು ಹೊಳೆಯಾರ್

# ಬೀದಿ ಎಂದರೆ

Although crowds gathered once if she but showed her face.
And even old men's eyes grew dine this had alone
Like some last courtier at a gypsy camping-place
Babbling of fallen majesty, records what's gone.

—W. B. Yeats

I

ಎಲ್ಲಿ ವಿಲಾಪಗಳು ಬಿರುಕೆದ್ದು ಉರಿಯುತಿವೆ
ರಾತ್ರಿಯು ತಡಕಾಟದಲಿ ಕಂದಿಯುತಿದೆ ಹಗಲು
ಕತ್ತಲ ಇಳಿಯುತಿದೆ ಹಗಲಿನೆದೆಯಲ್ಲಿ
ಮುಬ್ಬುಗಣ್ಣಿನ ದೀಪಗಳು ಹಾದರ ಹಾದಿಗೆ ಬೆಳಕು ಚೆಲ್ಲಿವೆ
ಕೊಳ್ಳಿ ದೆವ್ವಗಳು ಹಲ್ಲುಕಿರಿಯುವ ಜಘನನರಮನೆಯಲ್ಲಿ

ದೂರದ ಯಾವುದೋ ಮೂಲೆಯ ಸಮುದ್ರ ತಡಿಯಲ್ಲಿ
ಅಲೆ ಅಲೆಗೆ ಡಿಕ್ಕಿ ಹೊಡೆಯುತ್ತ ಅಲೆವ
ಹಾಯಿ ದೋಣಿಯುಲಿ
ಉರಿಯುವ ಬತ್ತಿಯನ್ನು
ಕೆಳಗೆ ಜಗ್ಗುತಿದೆ ಚಿಮಣಿ

ಬಸೂ, ಉಪನ್ಯಾಸಕರು, ಕೆ.ಎಲ್.ಇ. ಮಹಿಳಾ ಕಾಲೇಜ್, ಗದಗ

ಬಿರುಗಾಳಿಯು ಬತ್ತೀಸರಾಗದಲಿ
ಗಾಲಿಬನ ಅಣುಕು ಕಾವ್ಯದ ತುಣುಕುಗಳು
ಬುರ್ಖಾ ಹೊಲಿಯುವಾಗ
ಗೀತವಾಗುತಿವೆ
ಮುಳ್ಳ ಗಾಲಿಬ್, ದೊರೆಸಾನಿ ಬಟ್ಟಲಿನ ಬುರುಗುನೊರೆ
ನೆಕ್ಕುವ ಸೋಣವಾಗುತ್ತಿದ್ದಾನೆ

ಕಸೂತಿ ಹೆಣೆಯುವ ಕೈ
ಎದೆ ತುಂಬ ಸೂಜಿ ನೇಯುತಿದೆ
ತುಟಿ ಮೇಲೆ ಕೆಂಡ ಬಿದ್ದಂತೆ
ತೊಡೆಗೆ ತಡುಕುವ ಬೆರಳ ಕಾತರದಲಿ
'ನೂರ'ಳ ಆತ್ಮರಾಗ ಶಹಜಾನರ ಎದೆಯ ಬಾಗಿಲನು ತಟ್ಟಲಿಲ್ಲ
ಹರಿಯುದ ನೀರಿನ ಮುಲಿತ ಸದ್ದಿನಲ್ಲಿ
ಬೆತ್ತಲ ರಾಣಿಯರ ಅಪ್ಪಿ ಹಿಡಿದಿರುವ ಮಂಚದಲಿ
ಯಾವ ಹುಡುಗನ ಚಿತ್ರ ಅಚ್ಚಾಗಿದೆಯೊ ಕಾಣೆ

ಊಳಿಡುವ ಶತಮಾನಗಳಿಂದಲೂ ದೋಖಾ ಇಲ್ಲದೆ
ಗುಡ್ಡದೋರೆಯಲ್ಲಿ ಚುವ್ರನ ಕಡಿದು ತಿನ್ನುವ ಇರುಳು
ಬೆದೆ ಎದ್ದ ನಾಯಿಗಳ ಕಾಲುಕೆಳಗೆ
ತಾಯಿಯೊಬ್ಬಳ ಉಲಿಕೆ
ಬೀದಿಯಲಿಳಿಬಿದ್ದ ಮುಂಡ ಹತಾರಗಳು
ಅಲು ಅಲುಗಿ ಗುಂಡಿಗೆ ತೋಡುತ್ತವೆ
ನನ್ನ ಜನಗಳ ಮೂತಿ ಲೆಕ್ಕಿಸದೆ

ಮೌನದ ಹಾಡುಗಳನು ಹೂತವರ ಬೀದಿಯಲಿ
ಉರಿದುರಿದು ಆರಿದ
ಗೋರಿದಾಳದಾತ್ಮಗಳು
ಸೇಣನ ಕುಣಿಕೆಯಲಿ ಕನಸಿನ ಕತ್ತನಿಟ್ಟು
ಬಾಯಿ ತೆರೆದಿವೆ
ಎಷ್ಟು ರುಂಡಗಳನೂ ಹುಗಿದರೂ
ನೋವಿನೊಡಲಲಿ ಬಾಯಿ ಬಿಟ್ಟದೆ ಎಚ್ಚರ

ಮಸುಕಲದ ರಕ್ತ ದಾಖಲೆಗಳು:
ಕನಸುಗಳ ಮಾತು ಮುಸ್ಸಂಜೆಯಲ್ಲಿ ಆರ್ತವಾಗಿ
ಬಿಕ್ಕುವ ಬತ್ತಲ ಮೂಳೆಗಳು
ಪುರಮಾಲಿಯು ರಕ್ತರಂಜಿತ ತಾಂಬೂಲ ಕವಳ
ಹಸಿದ ಹೊಟ್ಟೆಯು ಮೇಲೆ ನರ್ತಿಸುವ ಕಾಲ
ಹಣದ ರಾಶಿಯು ಮೇಲೆ ಮೆಲ್ಲಗಡಿಯಿಡುಂತ ನಡೆದ
ಮಂತ್ರಿನ ಮಂದಿರೆಯಲಿ ಕಂದಿಕದಿ ಪ್ರಾಯಂಗಳ ಕಂದ್ದ ಉಸಿರು
ಲಂಪಟತನ ಮಬ್ಬಿನಲಿ ಹೂತು ಹೋಗಿದೆ ಬೀದಿ

ಬೀದಿ ಎಂದರೆ
ಈ ದೇಶದ ದಿಲ್ಲಿ ಇದ್ದಂತೆ

2
ನನ್ನ ದಿನಚರಿಯು
ಹಿಂಡು ಪುಟಗಳ ಮೂಲೆಯೊಂದರ ಮಾತುಗಳು
ಬಸವನ ಹೆದ್ದಾರಿಯಲ್ಲಿ
ಕವಲೊಡದಿವೆ ಅಡ್ಡ ರಸ್ತೆಗಳು
ಬುದ್ಧನ ಮಣ್ಣಿನಲಿ
ಬೋಧಿವೃಕ್ಷದ ಬಿಳಲು
ಶಾಂತಿದೂತೆಯು ಗರ್ಭದಲಿ
ಸಾವಿರ ಸಾವಿರ ಮುಖವಿಲ್ಲ ಕ್ರೌರ್ಯದ ಬೀಜಗಳು
ಕುರುಕ್ಷೇತ್ರವೋ ಹಂದಿಗಳ ಬೀಡು
ಈ ಪ್ರಸ್ಥಭೂಮಿ ಸಮಾಧಿಗಳ ನಗರ
ಬೀದಿ ಎಂದರೆ ಮೈಲುಗಲ್ಲು
ಮೈಲುಗಲ್ಲು ಅಂದರೆ ಅಸ್ತಮಾನ
ಅಸ್ತಮಾನ ಎಂದರೆ ನನ್ನ ದಿನಚರಿಯು ಪುಸ್ತಕ
ನನ್ನ ದಿನಚರಿಯು ಪುಟಗಳಲ್ಲಿ ಪುಟ್ಟ ಕವಿತೆ
ಪುಟ್ಟ ಕವಿತೆ ಎಂದರೆ ಬೆಳಗು
3
ಬೀದಿ ಎಂದರೆ
ಈ ದೇಶದ ದಿಲ್ಲಿ ಇದ್ದಂತೆ

— ಬಕೂ

ವಿಶೇಷ ಲೇಖನ

# ದೇಶಕ್ಕೊಂದು ಸಾಂಸ್ಕೃತಿಕ ನೀತಿಯ ಬಗ್ಗೆ ಕರಡು ಹೇಳಿಕೆ

1

ರಥಬೀದಿ ಗೆಳೆಯರು (ರಿ.) ಉಡುಪಿ ಸಾಂಸ್ಕೃತಿಕ ಸಂಘಟನೆ, ಫೆಬ್ರವರಿ 22–23, 1992 ರಂದು ಎರಡು ದಿನಗಳ ಕಾಲ ಉಡುಪಿಯಲ್ಲಿ ಹಕ್ಸರ್ ಸಮಿತಿಯ ಆಧಾರದ ಹಿನ್ನೆಲೆಯಲ್ಲಿ "ಕಲೆ, ಸಂಸ್ಕೃತಿ, ಮೌಲ್ಯಗಳು–ಇಂದು" ಎನ್ನುವ ವಿಷಯದ ಮೇಲೆ ನಡೆದ "ರಾಷ್ಟ್ರೀಯ ಸಾಂಸ್ಕೃತಿಕ ಸಂವಾದ"ದಲ್ಲಿ ರೂಪುಗೊಂಡ ಹೇಳಿಕೆ ಇದು. ಎರಡು ದಿನಗಳ ಕಾಲ ನಡೆದ ಚರ್ಚೆ, ಸಂವಾದಗಳನ್ನು ಸಂಗ್ರಹಿಸಿ ಈ ಕೆಳಕಂಡ ಜನರ ಸಮಿತಿ ಈ ಕರಡು ಹೇಳಿಕೆಯನ್ನು ಸಿದ್ಧಪಡಿಸಿತು.

ಅಧ್ಯಕ್ಷರು : ಡಾ॥ ಯು.ಆರ್. ಅನಂತಮೂರ್ತಿ, ಸದಸ್ಯರು : ಕೆ.ವಿ. ಸುಬ್ಬಣ್ಣ, ಬಿ.ವಿ. ಕಾರಂತ, ಕೀರ್ತಿನಾಥ ಕುರ್ತಕೋಟಿ, ಡಿ.ಆರ್. ನಾಗರಾಜ್, ವೇಲೇರಿಯನ್ ರೋಡ್ರಿಗಸ್, ನ. ರತ್ನ.

2

ಈ ವರದಿಯು ಚರ್ಚೆ ಅನೇಕ ಸಂಕೀರ್ಣ ವಿಷಯಂಗಳನ್ನೊಳಗೊಂಡಿದೆ ಎಂದು ಈ ಸಂವಾದ ಮೊದಲಿಗೆಯೇ ಭಾವಿಸುತ್ತದೆ.

ಮೊದಲಿಗೆ, ಹಕ್ಸರ್ ಸಮಿತಿ ವರದಿ ಗೊತ್ತಿದ್ದೋ ಗೊತ್ತಿಲ್ಲದೆಯೋ ಕೆಲವು ಸಾಂಸ್ಕೃತಿಕ ಸಂಸ್ಥೆಗಳ ಪುನರ್ ಸಮೀಕ್ಷೆಯಾಗಿದೆ. ಒಟ್ಟು ಸಾಂಸ್ಕೃತಿಕ ನೀತಿಯೇ ಆಗಿ ರೂಪುಗೊಂಡಿದೆ ಎಂಬುದನ್ನು ಈ ಸಂವಾದ ಗಮನಿಸಿದೆ. ಈ ಹಿನ್ನೆಲೆಯಲ್ಲಿ ನಮ್ಮ ಹೇಳಿಕೆಗೆ ಎರಡು ಭಾಗಗಳಿವೆ:

1. ವರದಿಯ ಹಿನ್ನೆಲೆಯಾಗಿರುವ ತಾತ್ವಿಕ ನೆಲೆಗಳು
2. ನಿರ್ದಿಷ್ಟ ಸಾಂಸ್ಕೃತಿಕ ನೀತಿಯ ಬಗೆಗೆ ವಿಮರ್ಶೆ

---

**ಇತ್ತೀಚೆಗೆ ಉಡುಪಿಯ 'ರಥಬೀದಿ ಗೆಳೆಯರು' ಸಂಘಟನೆಯು ಹಕ್ಸರ್ ಸಮಿತಿಯ ವರದಿಯ ಆಧಾರದ ಮೇಲೆ ಚರ್ಚೆ ಏರ್ಪಡಿಸಿತ್ತು. ಇದೊಂದು ಅಪೂರ್ವವಾದ ಚರ್ಚೆಯಾಗಿತ್ತು. ಶ್ರೀಮತಿ ಪುಪುಲ್ ಜಯಕರ ಅವರಂಥವರು ಭಾಗವಹಿಸಿದ್ದರು. ಆ ಸಂದರ್ಭದಲ್ಲಿ ಚರ್ಚೆಯ ನಂತರ ಒಂದು ಕರಡು ಹೇಳಿಕೆಯನ್ನು ಸಿದ್ಧಪಡಿಸಿತು. ಅದನ್ನು ಸಾಂಸ್ಕೃತಿಕ ದಾಖಲಾತಿಗಾಗಿ ಇಲ್ಲಿ ಪ್ರಕಟಿಸುತ್ತಿದ್ದೇವೆ.**

**—ಸಂ.**

## ಭಾಗ ಒಂದು : ವರದಿಯ ತಾತ್ವಿಕ ನೆಲೆಗಳು

1. ಭಾರತ ಒಂದು ಬಹುಕೇಂದ್ರಿತ ಜನಾಂಗ ಹಾಗೂ ಸಮಾಜಗಳ ದೇಶ ಎಂಬ ಕಲ್ಪನೆ ಅಷ್ಟು ಆಳವಾಗಿ ಈ ವರದಿಯಲ್ಲಿ ಬೇರೂರಿಲ್ಲದಿರುವುದನ್ನು ಈ ಸಂವಾದ ಗಮನಿಸಿದೆ. ಭಾರತದ ಬಹುರೂಪತೆಯ ಬಗೆಗೆ ಈ ವರದಿಯಲ್ಲಿ ಉಲ್ಲೇಖ ಗಳಿದ್ದರೂ ಅದು ಬಹುಮಟ್ಟಿಗೆ ಏಕಕೇಂದ್ರಿತ ನಿಲುವಿನಿಂದಲೇ ಹುಟ್ಟಿದೆ ಎಂಬುದನ್ನು ಕೂಡ ಗಮನಿಸಿದ್ದೇವೆ. ಈ ಸಮಾನ ಬಹುಕೇಂದ್ರಿತ ಜನಾಂಗಗಳ ಕಲ್ಪನೆಯಿಂದ ಮಾತ್ರ ಅರ್ಥಪೂರ್ಣವಾದ ಸಾಂಸ್ಕೃತಿಕ ನೀತಿ ರೂಪುಗೊಳ್ಳಲು ಸಾಧ್ಯ.

2. ಸಂಸ್ಕೃತಿ, ಸಾಂಸ್ಕೃತಿಕ ನೀತಿ ಮತ್ತು ಯೋಜನೆಗಳ ನಡುವಿನ ಸಂಬಂಧ ತೀರಾ ಸಂಕೀರ್ಣವಾದದ್ದು. ಸಂವಾದದಲ್ಲಿ ಕೂಡ ಈ ಬಗೆಗೆ ಎರಡು ನಿಲುವುಗಳು ಮೂಡಿಬಂದವು. ಒಂದು, ಪ್ರಭುತ್ವದ ಮಧ್ಯ ಪ್ರವೇಶವನ್ನೇ ನಿರಾಕರಿಸುವ ನಿಲುವು, ಇನ್ನೊಂದು, ಸಾಂಸ್ಕೃತಿಕ ನೀತಿ ಅಪೇಕ್ಷಣೀಯ ಮಾತ್ರವಲ್ಲ ಅಗತ್ಯ ಎಂದು.

ಸಾಹಿತ್ಯ–ಸಂಸ್ಕೃತಿಗಳ ವ್ಯವಹಾರಗಳಲ್ಲಿ ಪ್ರಭುತ್ವದ ಮಧ್ಯ ಪ್ರವೇಶ ಅಪೇಕ್ಷ ಣೀಯವಲ್ಲವಾದರೂ ರಾಷ್ಟ್ರೀಯ ಪ್ರಭುತ್ವದ ಯೋಜನಾಕ್ರಮಗಳ ವ್ಯಾಪಕ ಪ್ರಭಾವದ ಕಾರಣದಿಂದಾಗಿ ಸರಕಾರಗಳು ರೂಪಿಸುವ ಸಾಂಸ್ಕೃತಿಕ ನೀತಿಯ ಬಗೆಗೆ ಮಧ್ಯ ಪ್ರವೇಶಿಸುವ ಹಕ್ಕನ್ನು ಜನರು ಉಳಿಸಿಕೊಳ್ಳಬೇಕು. ಈ ದೃಷ್ಟಿಯಿಂದ ಈ ಸಂವಾದ ತನ್ನ ನಿಲುವುಗಳನ್ನು ಪ್ರಕಟಿಸಿದೆ.

3. ಹಿಂದಿ ಮತ್ತು ಇಂಗ್ಲೀಷ್‌ಗಳೆರಡೇ ಈ ರಾಷ್ಟ್ರದ ಸಂಪರ್ಕ ಭಾಷೆಗಳೆಂಬ ಪರೋಕ್ಷ ನಿಲುವಿನಿಂದ ಈ ವರದಿ ರೂಪುಗೊಂಡಿರುವ ಹಾಗೆ ಕಾಣುತ್ತದೆ. ಇದಕ್ಕೆ ಬದಲಾಗಿ ಭಾರತದ ಅನೇಕ ಭಾಷೆಗಳ ನಡುವೆ ವ್ಯಾಪಕ ಮತ್ತು ವೈವಿಧ್ಯಮಯ ಕಲಿಕೆಯ ವ್ಯವಸ್ಥೆಗಳು ನಿರ್ಮಾಣವಾಗಿ ವಿದ್ವಾಂಸರು ಮತ್ತು ಕಲಾವಿದರು ಅದರಲ್ಲಿ ಭಾಗಿಗಳಾಗಬೇಕು. ಈ ಯೋಜನೆ ಅಂತಿಮವಾಗಿ ನಿಜವಾಗಿಯೂ ಉಪಯುಕ್ತ. ರಾಷ್ಟ್ರೀಯ ಸಾಂಸ್ಕೃತಿಕ ನೀತಿಯ ಒಂದು ಅಡಿಗಲ್ಲಾಗುತ್ತದೆ ಎಂಬುದು ಸಂವಾದದ ಅಭಿಪ್ರಾಯ.

## ಭಾಗ ಎರಡು : ನಿರ್ದಿಷ್ಟ ಸಾಂಸ್ಕೃತಿಕ ನೀತಿಗಳ ವಿಮರ್ಶೆ

### 1. ರಾಷ್ಟ್ರೀಯ ನಾಟಕಶಾಲೆ (NSD) ಯನ್ನು ಕುರಿತು

1. NSD ಈಗಿರುವ ಸ್ವರೂಪದಲ್ಲಿ ಅನೇಕ ರೀತಿಯ ಲೋಪದೋಷಗಳಿಗೆ ಈಡಾಗಿದೆ. ಅದು ಯಾವ ಅರ್ಥದಲ್ಲೂ ರಾಷ್ಟ್ರೀಯ ನಾಟಕ ಶಾಲೆಯಲ್ಲ. ಹೀಗಾಗಿ ತಕ್ಷಣ NSDಯ ಈಗಿನ ಕೋರ್ಸುಗಳನ್ನು ನಿಲ್ಲಿಸಬೇಕೆಂದು ನಾವು ಭಾವಿಸು

ತ್ತೇವೆ. ಈಗ ಅದು ಇಲ್ಲಿ ನಡೆಸುತ್ತಿರುವ ಶಿಕ್ಷಣವನ್ನು ಪ್ರಾದೇಶಿಕ ಶಾಲೆಗಳಿಗೆ ವರ್ಗಾಯಿಸಬೇಕು.

2. ಭಾರತದಲ್ಲಿ ಅನೇಕ ಪ್ರಾದೇಶಿಕ ನಾಟಕ ಶಾಲೆಗಳಿರಬೇಕು. ದೆಹಲಿಯ NSD ಯು ಈ ಪ್ರಾದೇಶಿಕ ನಾಟಕ ಶಾಲೆಗಳ ಜತೆಗೆ ಸಾವಯವ ಸಂಬಂಧವಿಟ್ಟು ಕೊಂಡಿರುವ ಉನ್ನತಾಧ್ಯಯನ ಸಂಸ್ಥೆಯಾಗಿ ಪರಿವರ್ತನೆಯಾಗಬೇಕು. ವಿಶ್ವವಿದ್ಯಾ ನಿಲಯಗಳು ಮತ್ತು ನಾಟಕ ತಂಡಗಳ ನಡುವಿನ ಅರ್ಥಪೂರ್ಣ ಕೊಂಡಿಯಾಗಿ ಇದು ರೂಪುಗೊಳ್ಳಲು ಸಾಧ್ಯವಾಗಬೇಕು.

## 2. ಅಕಾಡೆಮಿಗಳ ಬಗೆಗೆ

1. ಸಾಹಿತ್ಯ ಅಕಾಡೆಮಿಯ ಈಗಿನ ಪ್ರಶಸ್ತಿ ನಿರ್ಣಯದ ಸ್ವರೂಪವನ್ನು ಸಂವಾದ ಚರ್ಚಿಸಿ ತನ್ನ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸಿತು. ಪ್ರಶಸ್ತಿ ನಿರ್ಣಯ ಮುಕ್ತ ಪ್ರಕ್ರಿಯೆಯಾಗಿ ಅಭಿರುಚಿ ನಿರ್ಮಾಣದಲ್ಲಿ ಒಂದು ದಿಟ್ಟ ಪ್ರಯೋಗವಾಗ ಬೇಕೆಂದು ನಾವು ಭಾವಿಸುತ್ತೇವೆ.

2. ಅಕಾಡೆಮಿಗಳ ರಚನಾ ಸ್ವರೂಪದ ಬಗೆಗೆ ಹಕ್ಸರ್ ಸಮಿತಿಯ ಮೌನ ವನ್ನು ಸಂವಾದ ಗಮನಿಸಿದೆ. ಇದ್ದುದರಲ್ಲಿ ಈಗ ಮೂಲ ಸದಸ್ಯರ ಹಂತದಲ್ಲಿ ಈಗಿನ ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಮಾದರಿ ಅಪೇಕ್ಷಣೀಯ. ಅಧ್ಯಕ್ಷರ ಆಯ್ಕೆಯಲ್ಲಿ ಈಗಿನ ಕೇಂದ್ರ ಸಾಹಿತ್ಯ ಅಕಾಡೆಮಿಯ ಮಾದರಿ ಅಪೇಕ್ಷಣೀಯ.

## 3. ಜೋನಲ್ (Zonal) ಕೇಂದ್ರಗಳ ಬಗೆಗೆ

1. ಹಕ್ಸರ್ ಸಮಿತಿಯ ವರದಿಯ ಉಲ್ಲೇಖವನ್ನು ಸಂವಾದ ಮುಂದುವರಿಸಿ ಜೋನಲ್ ಕೇಂದ್ರಗಳನ್ನು ರದ್ದು ಮಾಡಬೇಕೆಂದು ನಾವು ಒತ್ತಾಯಿಸುತ್ತೇವೆ.

## 4. ಎಲೆಕ್ಟ್ರಾನಿಕ್ (Electronic) ಮಾಧ್ಯಮಗಳ ಬಗೆಗೆ

ಹಕ್ಸರ್ ಸಮಿತಿ ವರದಿಗೂ ಇದಕ್ಕೂ ನೇರವಾದ ಸಂಬಂಧ ಇಲ್ಲವಾದರೂ ಒಟ್ಟು ಸಾಂಸ್ಕೃತಿಕ ನೀತಿಯ ಸಮಗ್ರತೆಯ ದೃಷ್ಟಿಯಿಂದ ಈ ಎಲೆಕ್ಟ್ರಾನಿಕ್ ಸಮೂಹ ಮಾಧ್ಯಮಗಳ ಪ್ರಶ್ನೆಯನ್ನು ನಾವು ಚರ್ಚಿಸಿದೆವು.

ಬಹುಸಂಖ್ಯಾತರ ಅಭಿರುಚಿ, ಸಂಸ್ಕೃತಿಯ ಪ್ರಸಾರ ಮತ್ತು ನಿಯಂತ್ರಣದ ದೃಷ್ಟಿಯಿಂದ ದೂರದರ್ಶನದ ಎರಡನೇ ಚಾನಲ್ ತುಂಬ ಅನಿವಾರ್ಯ ಮತ್ತು ತಕ್ಷಣದ ಅಗತ್ಯ ಮತ್ತು ಇದರ ನಿರ್ವಹಣೆ ಮತ್ತು ರೂಪಿಸುವಿಕೆ ಆಯಾ ಪ್ರದೇಶ ಗಳಿಂದಲೇ ಆಗಬೇಕು.

**5. ಸಾಂಸ್ಕೃತಿಕ ಕೊಳ್ಳು ಕೊಡುವಿಕೆಯ ಬಗೆಗೆ**

ಪಶ್ಚಿಮ ಕೇಂದ್ರಿತ ದರ್ಶನ ಮತ್ತು ಕಲೆಯ ಯಜಮಾನಿಕೆಯಿಂದ ಬಿಡಿಸಿಕೊಳ್ಳುವ ಅತ್ಯಂತ ಪರಿಣಾಮಕಾರೀ ಮಾರ್ಗವೆಂದರೆ ಏಷ್ಯಾದ ಉಳಿದ ಕಲಾ ಮತ್ತು ಸಾಂಸ್ಕೃತಿಕ ಪರಂಪರೆಯೊಂದಿಗೆ ಆಳವಾದ ಕೊಳ್ ಕೊಡುವಿಕೆಯನ್ನು ಪ್ರಾರಂಭಿಸುವುದು. ಈ ಸಂವಾದ ಸೀಮಿತಾರ್ಥದ ಸಾಂಸ್ಕೃತಿಕ ಕೊಳ್ ಕೊಡುವಿಕೆಯಿಂದ ಮೀರಿದ ಪ್ರಾಮುಖ್ಯತೆಗಳನ್ನು ಪಡೆಕೊಳ್ಳುವಂತಾಗಬೇಕೆಂದು ಅಪೇಕ್ಷಿಸುತ್ತದೆ.

**6. ಕಡೆಯ ಮುಖ್ಯ ಸಲಹೆ:**

**ಪರಮೋಚ್ಚ ಸಾಂಸ್ಕೃತಿಕ ಮಂಡಳಿಯ ಅಗತ್ಯ** – ದೇಶದ ಸಂಸ್ಕೃತಿ ಮತ್ತು ಸಾಂಸ್ಕೃತಿಕ ನೀತಿಯನ್ನು ಕಾಡುತ್ತಿರುವ ಅನೇಕ ರೋಗಗಳನ್ನು ಎದುರಿಸುವ ಒಂದು ಪರಿಣಾಮಕಾರೀ ವಿಧಾನವೆಂದರೆ ಒಂದು National Art Council ನ್ನು ರೂಪಿಸುವುದು. ಅದರ ಸ್ವರೂಪ ಸಂಪೂರ್ಣವಾಗಿ ಸ್ವಾಯತ್ತವಾಗಿರಬೇಕು. ಅದರ ಕೆಲಸದ ಸ್ವರೂಪ ಸ್ಥೂಲವಾಗಿ ಹೀಗೆ:

1. ದೇಶದ ಸಮಸ್ತ ಸಾಂಸ್ಕೃತಿಕ ಸಂಸ್ಥೆಗಳ ಮೇಲುಸ್ತುವಾರಿ, ಹಣಕಾಸು ಸಮನ್ವಯದ ಹೊಣೆ ಈ Arts Council ನದ್ದು.
2. ಇದರ ಸ್ವರೂಪ ಯು.ಜಿ.ಸಿ. ರೀತಿಯದು. ಜನತಂತ್ರೀಯ ಆಶೋತ್ತರ ಮತ್ತು ವೈವಿಧ್ಯಗಳನ್ನು ಗಮನದಲ್ಲಿಟ್ಟು ಸರಕಾರ ಒಂದು ವಿಶಾಲ ಕೌನ್ಸಿಲ್ ಅನ್ನು ರೂಪಿಸಬಹುದು.

—ಇದಿಷ್ಟು ನಮ್ಮ tentative ಆದ ಟಿಪ್ಪಣಿಗಳು. ●

## ಅಕ್ಕ ಕೇಳೇ....

ನಿನ್ನ ಮೈಯ
ರೋಮ ರೋಮದ ತುಂಬ
ಉಬ್ಬಸದ ಭಾವನೆಗಳು ಉಸಿರೊಡೆದರೆ
ನೀ ಪಟ್ಟ ಪಾಡೆಲ್ಲವೂ ಹುಚ್ಚು ಹಾಡುಗಳಾದವೇನೇ ಅಕ್ಕ?

ನಿನ್ನನುಭವ ಮಂಟಪ ಇತಿಹಾಸ ಕಥೆಯಲ್ಲ
ಅಂದಿನ ನಿನ್ನ ವರ್ತಮಾನದವಮಾನ
ನನ್ನದೂ ಆಗಿದೆಯಲ್ಲೆ

---

ಗೀತಾ ಡಿ.ಸಿ., ದೊಡ್ಡಹೆಜ್ಜಾಜಿ ಪೋ॥, ದೊಡ್ಡಬಳ್ಳಾಪುರ ತಾ॥, ಬೆಂಗಳೂರು ಗ್ರಾ॥ ಜಿಲ್ಲೆ

ಅಕ್ಕ ಕೇಳೇ, ನಾ ಹೇಳ ಹೊರಟಿದ್ದು:
ನೀನೊಂದು ಕಂಡ ಕನಸಿನಂಥ ಕನಸು
ಸದಾ ಕನಸುವ ನಾನೂ ಕಂಡೆ
ನಿನ್ನಂಥದೇ ಕನಸ-
ಲ್ಲ, ನಗದಿರು, ನಕ್ಕರೆ ಚೆನ್ನನ ಆಣೆ!

ಅಕ್ಕ ನೀ ಕರೆದರೆ ಬಾರದ
ಚೆನ್ನತ್ತಿದರೆ ಕೈಗೆ ಸಿಗದ
ನಿನ್ನ ಕನಸಲ್ಲಿ ಕಂಡ ಗೊರವ
ಅದೇಥ ಸುಲಿಪಲ್ಲ ಚೆಲುವನವ
ಮಾತಾಡದೆ ಹೋದನೇ ಆ ನಿನ್ನ ಚೆನ್ನ?

ಅಕ್ಕ ಕೇಳೇ ನನ್ನ ಕನಸಿನ ಚೆನ್ನ-
ಥೂ! ನಿನ್ನಂತೆ ಹೇಳಲಾರೆನವ್ವ ನಾನು
ಅಕ್ಕ ಕೇಳೇ, ಕನಸಲ್ಲಿ ಬಂದವನು
ಕಂಡು ನನ್ನ ಕೈ ಹಿಡಿದವನ
ಪಿಸುಮಾತು, ಬಿಸಿಯುಸಿರು ನೆನಪೆ ರೋಮಾಂಚನ!

ಚೆನ್ನ ನುಡಿದ:
ನಾನು ಪುರುಷ, ನೀನು ಪ್ರಕೃತಿ
ಎಂದು ಹೆಸರಿಟ್ಟು ಕಂದಕವ ತೋಡಿ
ಗೋಡೆ ಕಟ್ಟುವರಲ್ಲೆ ನನ್ನ ನಿನ್ನ ನಡುವೆ
ಪ್ರಿಯ ಆತ್ಮ ಸಂಗಾತಿಯೆ ಬಾ ಎಂದು
ಪಕ್ಕದಲ್ಲಿ ಕೂರಿಸಿಕೊಂಡವನು
'ಪ್ರೇಮವೇ ಜಗದಾದಿ ಕಾರಣಾತೀತವದು
ಪ್ರಕಟಗೊಂಡಿದೆ ಬೆಸೆದು ನಮ್ಮಿಬ್ಬರಲ್ಲಿ'
ಎಂದು ನನ್ನ ದಿಟ್ಟಿಸಿದನವ್ವ
ಎದುರಿಸದೆ ಆ ಕರುಣಾಳ ಕಣ್ಣುಗಳ
ಲವನೆದೆಯಲ್ಲಿ ಇಂಬುಗೊಂಡು ಸುಖಿಯಾದೆ

ಅಕ್ಕ ಕೇಳೆ....

— ಗೀತಾ ಡಿ. ಸಿ.

# ಕಲಕೇರಿ ಗೀತೆ

ಈ ಮೃಡಗಿರಿಯ ನಾಡಿನಲ್ಲಿ
ಮೃಡನೇ ಇಲ್ಲ
ಅಂತೆಯೇ ಮತ್ತೆ
ದುಶ್ಯಾಸನರು ತಲೆ ಎತ್ತಿದ್ದಾರೆ
ಮತ್ತೊಮ್ಮೆ
ಬಾಲೆ ದ್ರೌಪದಿಯ ವಸ್ತ್ರಾಪಹರಣ
ಈ ನಾಡಿನಲ್ಲಿ ॥ಪ॥

ಈ ವಸ್ತ್ರಾಪಹರಣದ ಕತೆ
ಚಿತ್ರಲೆಯ ವ್ಯಥೆ
ಹೊಸತಲ್ಲ ಇವರಿಗೆ
ಇಷ್ಟು ವ್ಯಥಳ ಬಿಡಲು
ಇವರಿಗುಂಟು
ಪರಂಪರೆಯ ನಂಟು
ಭಾರತದ ಕೌರವರ ಬೆಂಬಲ
ಉಡುಂತಡಿಯ ಅಕ್ಕನ
ಸೀರೆ ಸೆಳೆದ ಕೌಶಿಕನ ಹಂಬಲ

ಈ ಮೃಡಗಿರಿಯ ನಾಡಿನಲ್ಲಿ
ಮೃಡನೇ ಇಲ್ಲ
ಅಂತೆಯೇ ಮತ್ತೆ
ದುಶ್ಯಾಸನರು ತಲೆ ಎತ್ತಿದ್ದಾರೆ

ಇಂತಿರಲು
ಈ ಪುರಾತನ ಕಿರಾತ
ಪರಂಪರೆ ಮರುಕಳಿಸಿದೆ
ಮತ್ತೆ ಕಲಕೇರಿಗಳಿಗೆ
ಬಿಡಾಟ ಗೂಳಿಗಳಿಗೆ

ಕುದುರೆಮೋತಿಯಲ್ಲಿ ಕೆಂಪಾಗಿ
ಅರಳಿ
ಸಾಲಹಳ್ಳಿಯಲಿ ಕೆರಳಿ
ಹೊಸಳ್ಳಿಯಲಿ ಸುತ್ತಿ ಸುಂಟರ ಗಾಳಿ ಅಲಲಾ....ಕೇವೂ....
ಸೀರೆ ಕುಬ್ಬುಸ ತರಗಲೆಗೆಳಂತೆ
ಹಾರಿ ಹೋಗಲು ಗಾಳಿಪಟ....ಹೇ....ಹೇ....
ಮತ್ತೆ ಈಗ ಕಲಕೇರಿಗೆ
ಅಗ್ರಸ್ತಾನದ ವ್ಯಾಘ್ರಪೀಠ!

ಈ ಮೃಡಗಿರಿಯು ನಾಡಿನಲ್ಲಿ
ಮೃಡನೇ ಇಲ್ಲ
ಅಂತೆಯೇ ಮತ್ತೆ
ದುಶ್ಯಾಸನರು ತಲೆ ಎತ್ತಿದ್ದಾರೆ

ಬೆತ್ತಲೆ ಗೊಳಿಸುವುದು
ಸೀರೆ ಸೆಳೆವುದು ಶೂರರ ಲಕ್ಷಣವೆ?
ಓ! ಕನ್ನಡದ ವೀರಪುತ್ರರೇ
ಹೆಣ್ಣು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ
ಎಂದ ಅಕ್ಕನ ಅರ್ಥ ಗೊತ್ತೆ ಗೋರಿಲ್ಲಾಗಳೇ?

ಮೃಡಗಿರಿಯು ಅಡಿಯಲ್ಲಿ
ಕಲಕೇರಿ ಉಡಿಯಲ್ಲಿ
ಎಂಥ ಕಾಡು ಮಾರಾಯರೇ
ಮನುಷ್ಯರೇ ಇಲ್ಲದ
ಖಡ್ಗಮೃಗಗಳ ದಂಡು
ಘೇಂಡಾಮೃಗಗಳ ಹಿಂಡು
ಹೆಣ್ಣು ಹಸು ಕರುವ ಮನ ಬಂದಂತೆ
ಅಂಗಾಂಗ ಕತ್ತರಿಸಿ
ತಿಂದವೆಂಬ ಸುದ್ದಿ
ಮನುಷ್ಯತ್ವ ಇದ್ದವರ ಎದೆಗೆ ಗುದ್ದಿ ಗುದ್ದಿ
ಹೇಳುತ್ತದೆ

ಇಲ್ಲಿ ರಾಕ್ಷಸರು
ಇಲ್ಲಿ ಮಂತ್ರ ಮಂತ್ರಿಗಳು
ನಿತ್ಯ ನೂತನವಾಗಿದ್ದಾರೆ
ಬೆತ್ತಲಿಸಿದ್ದಾರೆ
ಸೀರೆ ಸೆಳೆದಿದ್ದಾರೆ
ಅಸುರ ಲೋಕದ ಶೂರರು!

ಈ ಮೃಡಗಿರಿಯು ನಾಡಿನಲ್ಲಿ
ಮೃಡನೇ ಇಲ್ಲ
ಅಂತೆಯೇ ಮತ್ತೆ
ದುಶ್ಯಾಸನರು ತಲೆ ಎತ್ತಿದ್ದಾರೆ

ಬೆತ್ತಲಿಸಿದ
ಈ ಬಾಲೆಯು ಅಂಗಾಂಗಗಳಲಿ
ನಿಮ್ಮ ತಂಗಿ ಅಕ್ಕಂದಿರ
ಅಂಗಾಂಗಗಳು ಕಾಣಲಿಲ್ಲವೆ?

ಅಂಗ ಅಂಗಗಳಲಿ
ಭೈರಂಗಿಯಾಗಿ ಕೊರೆದ
ನಿಮ್ಮ ಕೈಗಳಿಗೆ ಸರ್ಪ
ಕಡಿವುದು ಸಾಧ್ಯವೆ
ಈ ಮೃಡಗಿರಿಯು ನಾಡಿನಲ್ಲಿ?

ಶಿಕ್ಷೆ ಉಂಟೆ ಈ ದುರ್ಬಲ
ಗೂಂಡ ನಮ್ಮ ಪೋಲೀಸ್ ಕಾನೂನಿನಲ್ಲಿ?

— ಗವಿಸಿದ್ಧ ಎನ್. ಬಳ್ಳಾರಿ

# ಅಬೋಲಿನಾ

ಅಬೋಲಿನಾ
ಹಾಡುಹಗಲೇ
ಹಾದರಕ್ಕೆ ಹೆದರಿ
ಮಗುವಿನಂತ ಮುಗುದೆ
ಪ್ರಾಣ ಬಿಟ್ಟಿದ್ದು
ಬರಿ ಮೈಯ್ಯ
ಮೋಹಕ್ಕೆ
ನಾನಿನ್ನೂ
ಸಾಯದೆ, ಬದುಕದೆ
ಹಗಲಿರುಳೂ
ಅಂಜಿದರೂ ಅಂಜದೆ
ಹಾದರಕ್ಕೆ ಬಲಿಯಾಗಿ
ಮತ್ತೆ ಮತ್ತೆ ಒಸರಾಗಿ
ಹೊಸ ಕನಸ
ಸೃಷ್ಟಿ ಮಾಡುತ್ತಾ
ಸಾಗುತ್ತೇನೆ
ನನ್ನ ಮೈಮನಸ
ಬೆಸೆದು ಕಾಡುವ
ಬಿರುಸಿನ ಓಟಕ್ಕೆ
ಜಗ್ಗಾಡಿ,
ಕುದುರೆ ನಡೆದ ನಾಡಿಗೆ
ಸಾಗುತ್ತಲೇ ಇರುತ್ತೇನೆ

— ಸುಜಾತ ಕುಮುಟಾ

ಸುಜಾತ ಕುಮುಟಾ, ನಂ. 232, 3ನೇ ಸ್ಟೇಜ್, 4ನೇ ಬ್ಲಾಕ್, ಬಸವೇಶ್ವರನಗರ, ಬೆಂಗಳೂರು

# "ಸಿಂಗಾರವ್ವ ಮತ್ತು ಅರಮನೆ"; ಒಂದು residual ವ್ಯವಸ್ಥೆಯ ಕಥೆ

— ಎಂ. ಹರಿನಾರಾಯಣ ಆಚಾರ್ಯ

ಹಳ್ಳಿಯ ಮನೆತನಗಳು, ಅವುಗಳ ಅವನತಿಯು ವಸ್ತುವಾಗಿರುವ ಅನೇಕ ಬರವಣಿಗೆಗಳು ಕನ್ನಡದಲ್ಲಿ ಬಂದಿವೆ. ಶಿವರಾಮ ಕಾರಂತರ "ಮರಳಿ ಮಣ್ಣಿಗೆ" ಕಾದಂಬರಿಯು ಒಂದು ಕುಟುಂಬದ ಮೂರು ತಲೆಮಾರಿನ ಕಥೆಯಾಗಿದೆ. ಚಂದ್ರಶೇಖರ ಕಂಬಾರರ "ಸಿಂಗಾರವ್ವ ಮತ್ತು ಅರಮನೆ" ಹಳೆಯ ಮನೆತನವೊಂದನ್ನು ವಸ್ತುವನ್ನಾಗಿರಿಸಿಕೊಂಡಿರುವ ಇನ್ನೊಂದು ಪ್ರಾತಿನಿಧಿಕ ಕೃತಿಯಾಗಿದೆ. ಕಾರಂತರ "ಮರಳಿ ಮಣ್ಣಿಗೆ" ಕಾದಂಬರಿಯು ಹೆಚ್ಚು brahminical ಆಗಿ ಕಂಡರೆ ಚಂದ್ರಶೇಖರ ಕಂಬಾರರ "ಸಿಂಗಾರವ್ವ ಮತ್ತು ಅರಮನೆ" ಕಾದಂಬರಿಯು ಜಾನಪದ ಮೆರುಗಿನಿಂದ ಕೂಡಿದ ರೋಚಕ ಕಾದಂಬರಿಯಾಗಿ ಕಾಣುತ್ತದೆ. ಹಿಂದೊಮ್ಮೆ ಐತಿಹ್ಯಗಳಿಗೆ ವಸ್ತುವಾಗಿದ್ದ ಈ ಹಳೆಯ ಮನೆತನಗಳ ಬದುಕು ಸಾಹಿತ್ಯದ ವಸ್ತುವಾಗುವುದರ ಹಿಂದೆ ಅನೇಕ ಕಾರಣಗಳಿವೆ. ಮೊದಲನೆಯ ಕಾರಣವೆಂದರೆ ಅವುಗಳು ನಶಿಸುತ್ತಿರುವ ಬದುಕಿನ ಪ್ರತೀಕಗಳಾಗಿರುವುದರಿಂದ ಅವು nostalgia ದ ವಸ್ತುಗಳಾಗಿರುವುದು. ಎರಡನೆಯದಾಗಿ ಅವುಗಳು ನಶಿಸುತ್ತಿರುವ ಅಥವ ನಶಿಸಿರುವ ಬದುಕಿನ ಭಾಗವಾಗಿದ್ದುಕೊಂಡು ವರ್ತಮಾನದ ಬದುಕಿನಿಂದ ಪ್ರತ್ಯೇಕವಾಗಿ ನಿಲ್ಲುವುದರಿಂದ ಸಾಹಿತ್ಯದ ವಸ್ತುವಿಗೆ ಬೇಕಾಗುವ ಸೌಂದರ್ಯವನ್ನು, ನಿಗೂಢತೆಯನ್ನು ಪಡೆಯುವುದು. ಈ ರೀತಿ ಅವುಗಳು ವರ್ತಮಾನದ ಬದುಕಿನಿಂದ ಬೇರ್ಪಟ್ಟು ನಿಲ್ಲುವುದರಿಂದ ಲೇಖಕನಿಗೆ ಅವುಗಳನ್ನು detached ಆಗಿ ನೋಡಲು ಸಾಧ್ಯವಾಗುತ್ತದೆ. ಇದರಿಂದಲೇ ಅವುಗಳ ಬಗೆಗಿನ ಅಪ್ರಿಯ ಸತ್ಯಗಳನ್ನು ನುಡಿಯುವಲ್ಲಿ ಲೇಖಕನಿಗೆ ಯಾವುದೇ ಅಳುಕಿಲ್ಲ. ಮೂರನೆಯದಾಗಿ ತನ್ನದೇ ಐತಿಹ್ಯಗಳನ್ನು, ಭ್ರಮೆಗಳನ್ನು ಹೊತ್ತು ಇಡೀ ಸಾಮಾಜಿಕ ಪ್ರಕ್ರಿಯೆಯ ಮುಖ್ಯ ಪ್ರವಾಹದಿಂದ ಬೇರ್ಪಟ್ಟು ಸ್ವತಂತ್ರವಾಗಿ ನಿಂತಂತೆ ಕಾಣುವ ಮನೆತನ ಅಥವ ಅರಮನೆ ವ್ಯವಸ್ಥೆ ಸೂಕ್ಷ್ಮವಾಗಿ ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಯನ್ನು ಪ್ರತಿಬಿಂಬಿಸುತ್ತಿರುವುದು. ಚಂದ್ರಶೇಖರ ಕಂಬಾರರ "ಸಿಂಗಾರವ್ವ ಮತ್ತು ಅರಮನೆ" ಕಾದಂಬರಿಯು ಇಂತಹ ಹಳೆಯ ಅರಮನೆಯೊಂದರ ಅವನತಿಯ ಕಥೆಯನ್ನು ವಸ್ತುವನ್ನಾಗಿಸಿಕೊಂಡಿರುವ ಪ್ರಾತಿನಿಧಿಕ ಕೃತಿಗಳಲ್ಲೊಂದು. ಕಂಬಾರರು ಈ ಕೃತಿಯಲ್ಲಿ ಮಾಡಿರುವ ಕೆಲಸವೆಂದರೆ ಈ ಅರಮನೆ ವ್ಯವಸ್ಥೆಯನ್ನು ಒಂದು residual force ಆಗಿ ಪರಿಣಾಮಕಾರಿಯಾಗಿ ಚಿತ್ರಿಸಿರುವುದು ಮತ್ತು ಈ

---

ಎಂ. ಹರಿನಾರಾಯಣ ಆಚಾರ್ಯ, ಉಪನ್ಯಾಸಕರು,
ಶ್ರೀ ರಾಮಕುಂಜೇಶ್ವರ ಪದವಿಪೂರ್ವ ಕಾಲೇಜು, ರಾಮಕುಂಜ ಪೋಸ್ಟ್, ಉಪ್ಪಿನಂಗಡಿ, ದ.ಕ.

ವ್ಯವಸ್ಥೆಯ ಅವನತಿಯ ಅನಿವಾರ್ಯತೆಯನ್ನು ಚಿತ್ರಿಸುವುದು. ಈ ಕಾದಂಬರಿಯು ಅರಮನೆ ವ್ಯವಸ್ಥೆಯನ್ನು ಯಾವ ರೀತಿ ಒಂದು residual foree ಆಗಿ ಚಿತ್ರಿಸುತ್ತದೆ? ಈ ವ್ಯವಸ್ಥೆಯ ಅವನತಿಗೆ ಕಾರಣಗಳೇನು? ಈ ಸಿಂಗಾರವ್ವ ಮತ್ತು ಅರಮನೆಯ ಕಥೆ ವರ್ತಮಾನದ ಬದುಕಿನ ಮೇಲೆ ಮಾಡುವ ವ್ಯಾಖ್ಯೆ ಏನು? ಎನ್ನುವ ಪ್ರಶ್ನೆಗಳನ್ನು ಇಲ್ಲಿ ಚರ್ಚಿಸಲು ಪ್ರಯತ್ನಿಸುತ್ತೇನೆ.

ಮೇಲ್ನೋಟಕ್ಕೆ ಶಿವಾಪುರದ ಅರಮನೆಯ ಅವನತಿಗೆ ಸರಗು ದೇಸಾಯಿಯ ಷಂಡತನ ಹಾಗೂ ಪರಮಶೆಟ್ಟಿ ಹಾಗೂ ಸಿಂಗಾರವ್ವನ ತಂದೆಯ ಆಸೆಬುರುಕತನಗಳೇ ಕಾರಣವಾಗಿ ಕಂಡರೂ ಅರಮನೆಯ ಹಿಂದಿನ ಪರಂಪರೆಯು ಷಂಡನಾದ ಅಪ್ಪಾಸಾಬ ದೇಸಾಯಿಯನ್ನು ಬಳುವಳಿಯಾಗಿ ಬಿಟ್ಟು ಹೋಗಿರುವುದರ ಹಿಂದೆ ದೀರ್ಘವಾದ ಸಾಮಾಜಿಕ ಬದಲಾವಣೆಯ ಐತಿಹಾಸಿಕ ಪ್ರಕ್ರಿಯೆಯ ಹಿನ್ನೆಲೆ ಇದೆ. ಈ ಸಾಮಾಜಿಕ ಬದಲಾವಣೆಯ ಕಾರಣದಿಂದ ಅರಮನೆಯ ಬದುಕು ನಿಧಾನವಾಗಿ ಸಮಾಜದಿಂದ ಬೇರ್ಪಟ್ಟು ಬಡಕಲಾಗುವುದು, ಸತ್ವಹೀನವಾಗುವುದು ಮತ್ತು ಷಂಡವಾಗುವುದು ಒಂದು ಐತಿಹಾಸಿಕ ಅನಿವಾರ್ಯತೆಯೇ ಆಗಿದೆ. ಆದುದರಿಂದ ಷಂಡನಾದ ಸರಗು ದೇಸಾಯಿಯು ಅರಮನೆಯ ಅವನತಿಗೆ ಕಾರಣವಾಗಿ ಕಾಣುವುದಕ್ಕಿಂತ ಹೆಚ್ಚು ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಸತ್ವಹೀನವಾದ ಅರಮನೆ ವ್ಯವಸ್ಥೆಯ ಸಂಕೇತವಾಗಿ ಕಾಣುತ್ತಾನೆ. ಈ ಸತ್ವಹೀನತೆಯೇ ಅರಮನೆಯ ಅವನತಿಗೆ ಸಮರ್ಥನೆಯಾಗಿ ಕಂಡು ಬರುತ್ತದೆ.

ಅರಮನೆಯ ಬಗೆಗಿನ ಐತಿಹ್ಯವೊಂದರಲ್ಲಿಯೇ ಅರಮನೆಯ ಅವನತಿಯ ಅನಿವಾರ್ಯತೆ ಸೂಚಿತವಾಗಿದೆ. ಶಿವಾಪುರದ ಅರಮನೆಯನ್ನು ಒಂದು ಪತ್ರಿಬನವನ್ನು ಕಡಿದು ಅದರ ಜಾಗದಲ್ಲಿ ಕಟ್ಟಿದ್ದರು. ಆವಾಗ ಜಂಗಮನೊಬ್ಬ "ಈ ಅರಮನ್ಯಾಗ ಪತ್ರಿಬನ ಬೆಳೀಲೋ" ಎಂದು ಶಾಪವಿಟ್ಟ. ಪ್ರಕೃತಿಯನ್ನು ಧಮನಿಸಿ ಬೆಳೆದ ಅರಮನೆ ವ್ಯವಸ್ಥೆ–ಊಳಿಗಮಾನ್ಯ ಪದ್ಧತಿ–ವ್ಯವಸ್ಥೆಯ ಮುಂದಿನ ಬೆಳವಣಿಗೆಗೆ ತಲೆಬಾಗಲೇ ಬೇಕು; ಅವನತಿಯನ್ನು ಹೊಂದಲೇಬೇಕು. ಈ ರೀತಿ ಅರಮನೆಯ ಹುಟ್ಟಿನ ಗರ್ಭದಲ್ಲಿಯೇ ಅದರ ಸಾವಿನ ಬೀಜಗಳಿವೆ. ಏಕೆಂದರೆ ಅರಮನೆ ವ್ಯವಸ್ಥೆ ಎಂದರೆ ವ್ಯವಸ್ಥೆಯ ನಿರಂತರ ಬದಲಾವಣೆಯ ಪ್ರಕ್ರಿಯೆಯ ಒಂದು ಹಂತ ಮಾತ್ರ. ಒಟ್ಟಿನಲ್ಲಿ ಒಂದೊಂದು dominant force ಆಗಿದ್ದ ಅರಮನೆ ವ್ಯವಸ್ಥೆಯು ಈಗ ಒಂದು residual force ಆಗಿರುವುದೇ ಅದರ ಅವನತಿಯ ಅನಿವಾರ್ಯತೆಯನ್ನು ಸೂಚಿಸುತ್ತದೆ.

ಆದರೆ ಅರಮನೆಗೆ ಈ ರೀತಿಯ ಸಾಮಾಜಿಕ ಹಾಗೂ ಆರ್ಥಿಕ ಮುಖವಿರುವಂತೆಯೇ ಕಲಾತ್ಮಕತೆಯ, ಸೌಂದರ್ಯದ ಹಾಗೂ ರಸಿಕತೆಯ ಮುಖವೂ ಇದಿದೆ.

ಸಿಂಗಾರವ್ವ ಅರಮನೆಯು ಈ ಮುಖದ ಪ್ರತೀಕವಾಗುತ್ತಾಳೆ. ಮತ್ತು ಸಿಂಗಾರವ್ವನ ಕಥೆ ಅರಮನೆಯ ಅವನತಿಯನ್ನು ಅದರೆಲ್ಲ ಸೌಂದರ್ಯ ಹಾಗೂ ಕಲಾತ್ಮಕತೆಯೊಂದಿಗೆ ತೋರಿಸುವ ಅರಮನೆಯ ಹಂಸನ್ಯತ್ಯವೇ ಆಗಿದೆ. ಸಿಂಗಾರವ್ವನೇ ಈ ರೀತಿ ಹೇಳುತ್ತಾಳೆ: "ನೋಡ್ರಾ ಇರು, ಈ ಅರಮನೀ ಪುಣ್ಯೆ. ದೇಸಾಯಿ ಷಂಡತನ, ನನ್ನ ಹಾವರ ಎಲ್ಲಾ ಮುಗ್ಯಾಕ ಬಂದಾವಾಗ. ದೀಪ ಆರೋವಾಗ ದೊಡ್ಡಗಾಗತೈತಲ್ಲಾ, ಹಾಂಗ ಇವರೆಲ್ಲಾ ದೊಡ್ಡದಾಗಿ ಉರ್ಯಾಕ ಹತ್ಯಾರ. ಇನ್ನೇನ ಎಲ್ಲಾ ಮುಗೀತೈತೀ, ನೋಡ್ರಾ ಇರು, ಮುಗೀತೈತಿ." ಸಿಂಗಾರವ್ವ ಸಾಮಾಜಿಕವಾಗಿ, ಆರ್ಥಿಕವಾಗಿ ಷಂಡವಾದ ಅರಮನೆ ವ್ಯವಸ್ಥೆಗೆ ತನ್ನ ಸೌಂದರ್ಯದಿಂದ, ಕಲಾತ್ಮಕತೆಯಿಂದ, ರಸಿಕತೆಯಿಂದ ಜೀವ ತುಂಬಲು ಪ್ರಯತ್ನಿಸುತ್ತಾಳೆ. ಆದರೆ ಇದರಲ್ಲಿ ಸಿಂಗಾರವ್ವ ವಿಫಲಳಾಗುತ್ತಾಳೆ, ತನ್ನ ಸೋಲಿನ ಬಗ್ಗೆ ಸಿಂಗಾರವ್ವ ಈ ರೀತಿ ಹೇಳುತ್ತಾಳೆ: "ಮೊದಲು ಇಲ್ಲಿ ಬಂದಾಗ ಅರಮನಿ ನೋಡಿದೆ. ಅರಮನಿ ತುಂಬಾ ಕಂಬಗಳು. ಕಂಬಕ್ಕೊಂದು ಮಕ್ಕಳ್ನ ಹಡೀಬೇಕಲ್ಲ.... ಅವಯ್ಯ, ನಾ ಇನ್ನೂ ಎಷ್ಟು ಕೆಲಸ ಮಾಡಬೇಕಲ್ಲ-ಅಂತಂದುಕೊಂಡು ಹುಟ್ಟಬರೋ ಮಕ್ಕಳಿಗಾಗಿ ಅರಮನಿ ಹಸನ ಮಾಡಬೇಕಂತ ಗುಡಸಾಕ ಶುರುಮಾಡಿದೆ....ಆದರೆ ದೇಸಾಯನ್ನ ನೋಡಿದ ಮ್ಯಾಲ ಅನ್ನಿಸ್ತು; ಈ ಅರಮನ್ಯಾಗ ಇನ್ನೇನು ಹುಟ್ಟೋದು ಇಲ್ಲ ಅಂತ. ಹುಟ್ಟಿದರ ಪತ್ರೀಬನ ಹುಟ್ಟಬೇಕಷ್ಟೆ...." ಚಾರಿತ್ರಿಕವಾಗಿ ತನ್ನ ಬೇರುಗಳನ್ನು ಕಳೆದುಕೊಂಡಿರುವ ಈ ಅರಮನೆ ವ್ಯವಸ್ಥೆಗೆ ಸಿಂಗಾರವ್ವ ಕೇವಲ ತನ್ನ ಕಲಾತ್ಮಕತೆಯಿಂದ, ಸೌಂದರ್ಯದಿಂದ, ರಸಿಕತೆಯಿಂದ ಪುನಶ್ಚೇತನವನ್ನು ನೀಡುವಲ್ಲಿ ವಿಫಲಳಾಗುವುದು ಸಹಜವೇ ಆಗಿದೆ. ಮತ್ತು ಸಿಂಗಾರವ್ವ ತನ್ನೆಲ್ಲಾ ಜೀವಂತಿಕೆಯ, ರಸಿಕತೆಯ ಹೊರತಾಗಿಯೂ ಅರಮನೆ ವ್ಯವಸ್ಥೆಗೆ ಜೀವ ತುಂಬಲು ವಿಫಲಳಾಗುವುದು ಆ ವ್ಯವಸ್ಥೆ ಒಂದು residual ವ್ಯವಸ್ಥೆಯಾಗಿರುವುದನ್ನು ಮತ್ತು ಅದರ ಪತನದ ಅನಿವಾರ್ಯತೆಯನ್ನು ಸೂಚಿಸುತ್ತದೆ.

ಆದರೆ ಸಿಂಗಾರವ್ವನ ದುರಂತಕ್ಕೆ, ಯಾತನೆಗೆ ಯಾವುದೇ ತಾರ್ಕಿಕ ವಿವರಣೆ ಸಿಗುವುದಿಲ್ಲ. ಈ ಅರಮನೆಯ ಕಂಬಗಳೆಡೆಯಲ್ಲಿ ಸಿಕ್ಕಿ ಆಕೆ ಏಕೆ ನರಳಬೇಕು? ಎನ್ನುವ ಪ್ರಶ್ನೆ ಕೊನೆಯವರೆಗೂ ಉತ್ತರವನ್ನು ಪಡೆಯದೆ ಉಳಿಯುತ್ತದೆ. ಆಕೆಯ ಯಾತನೆಯ ಬಗ್ಗೆ ಶೀನಿಂಗವ್ವನೇ ಈ ರೀತಿ ಹೇಳುತ್ತಾಳೆ: "ಕೆಲವರಿರುತ್ತಾರೆ; ನೀವು ಬೆರಳು ಮಾಡಿ ತೋರುವಂಥ ಯಾವ ಕರ್ಮ, ಯಾವ ಪಾಪ, ಯಾವ ಕೆಟ್ಟ ಕೆಲಸವನ್ನೂ ಮಾಡಿರುವುದಿಲ್ಲ. ಇನ್ನೊಬ್ಬರ ಮನಸ್ಸನ್ನು ಕೂಡ ನೋಯಿಸಿರುವುದಿಲ್ಲ. ಆದರೆ ಜೀವನದುದ್ದಕ್ಕೂ ಚಾಂಡಾಲರು ಅನುಭವಿಸುವಂತಹ ಯಾತನೆಯನ್ನು ಅನುಭವಿಸುತ್ತಾರೆ...ಹಿಂಗ್ಯಾಕಂಬೋದಕ್ಕೆ ಕಾರಣ ಕಡೀ ತನಕ ಗೊತ್ತಾಗೋದೇ ಇಲ್ಲ, ಯಾವುದಕ್ಕೂ ಒಂದು ತರ್ಕ ಇರಬೇಕಲ್ಲ. ಅದಿಲ್ಲಿ ಇರೋದೇ ಇಲ್ಲ. ನಮ್ಮ

ಡೋರೇಸಾನಿ ಅಂಥವಳು." ಮುಂದೆ ಸಿಂಗಾರವ್ವನೇ "ದೇವರು ಇಷ್ಟು ದೊಡ್ಡ ಶಿಕ್ಷಾ ನನಗ್ಯಾಕ ಕೊಡಬೇಕು?" ಎನ್ನುವ ಉತ್ತರಹೀನ ಪ್ರಶ್ನೆಯನ್ನು ಕೇಳುತ್ತಾಳೆ. ಯಾವುದೇ ತಪ್ಪನ್ನು ಮಾಡದೆ ಕೊನೆಗೆ ಪಾಪಪ್ರಜ್ಞೆಯನ್ನನುಭವಿಸುತ್ತಾ ಸಾಯುವ ಸಿಂಗಾರವ್ವನ ದುರಂತ ಯಾವುದೇ ತಾರ್ಕಿಕ ವಿವರಣೆಗೆ ಸಿಲುಕದೆ ಉಳಿಯುತ್ತದೆ. ಆಳದಲ್ಲಿ ಆಕೆಯ ದುರಂತ ಗ್ರೀಕ್ ದುರಂತ ನಾಟಕಗಳ ದುರಂತದಷ್ಟೇ ತೀವ್ರವಾದ ದುರಂತವಾಗಿದೆ ಮತ್ತು ಆಕೆಯ ದುರಂತದ ಅಸಂಗತತೆಯ ಪ್ರಶ್ನೆ ಒಂದು ಮೂಲಭೂತ ಅಸ್ತಿತ್ವವಾದಿ ಪ್ರಶ್ನೆಯೇ ಆಗಿದೆ.

ಸಿಂಗಾರವ್ವನನ್ನು ಈ ರೀತಿ ಅರಮನೆಯ ಬದುಕಿನಿಂದ ಪ್ರತ್ಯೇಕಿಸಿ ಆಕೆಯ ಬಗ್ಗೆ ಈ ಮೂಲಭೂತ ಪ್ರಶ್ನೆಯನ್ನು ಕೇಳಲು ಸಾಧ್ಯವಾಗುವುದರಿಂದಲೇ ಆಕೆ ಕೇವಲ ಒಂದು ಜಾನಪದ ಬದುಕಿನ ಪಾತ್ರವಾಗಿ ಉಳಿಯದೆ ಒಬ್ಬ Romantic Heroineನ "ವ್ಯಕ್ತಿತ್ವ"ವನ್ನು, individuality ಯನ್ನು ಪಡೆಯುತ್ತಾಳೆ. ಜಾನಪದ ಜಗತ್ತಿನಿಂದ ಆಕೆಯ ಪ್ರತ್ಯೇಕೀಕರಣದ ಸಾಧ್ಯತೆಯನ್ನು ಕಾದಂಬರಿಯ ಹೆಸರೇ ಸೂಚಿಸುತ್ತದೆ–"ಸಿಂಗಾರವ್ವ ಮತ್ತು ಅರಮನೆ". ಆಕೆ ಅರಮನೆಯ ಸಿಂಗಾರವ್ವನೂ ಅಲ್ಲ ಅಥವ ಅರಮನೆ ಸಿಂಗಾರವ್ವನ ಅರಮನೆಯೂ ಅಲ್ಲ. "ಚಟ್ಟದ ಜೀವ" ಎನ್ನುವ ಹೆಸರಿಗೂ "ಸಿಂಗಾರವ್ವ ಮತ್ತು ಅರಮನೆ" ಎನ್ನುವ ಹೆಸರಿಗೂ ಇರುವ ವ್ಯತ್ಯಾಸವನ್ನು ಇಲ್ಲಿ ಗಮನಿಸಬಹುದು. ಈ ರೀತಿ ಸಿಂಗಾರವ್ವ ಮತ್ತು ಅರಮನೆಯ ನಡುವೆ ಯಾವುದೇ organic ಆದ ಸಂಬಂಧವಿಲ್ಲದಿರುವುದರಿಂದಲೇ ಮತ್ತು ಆಕೆ ಅದಮ್ಯ ಅಂತಃಸತ್ವದಿಂದ, ಜೀವಂತಿಕೆಯಿಂದ ತುಂಬಿರುವ "ವ್ಯಕ್ತಿತ್ವ"ವಾಗಿ ಕಾಣುವುದರಿಂದಲೇ ಆಕೆ ಒಬ್ಬ Romantic Heroineನ ಗುಣಗಳನ್ನು ಪಡೆಯುತ್ತಾಳೆ. ಆಕೆ ಒಬ್ಬ Romantic Heroineನ ಗುಣಗಳನ್ನು ಪಡೆಯುವುದರಿಂದಲೇ ಅರಮನೆಯ ಅವನತಿಯನ್ನು ಹೊಸ ಬದುಕಿನ ಆಗಮನವನ್ನಾಗಿ ಪರಿವರ್ತಿಸುವ ಶಕ್ತಿ ಆಕೆಗಿದೆ. "ಅಪ್ಪು ಯಾಕೆ ಅಭಿಮಾನ ಹಿಡೀತೀರಿ? ಬ್ಯಾರೆ ಸೀಮೀ ದೇವರು ಮೂಡ್ಯಾನ. ಬರೋದಕ್ಕ ತಯ್ಯಾರಾಗ್ಯಾನ. ಅವನಿಗೆ ಇಂಥಾ ಅಭಿಮಾನ ಇಲ್ಲs ಇಲ್ಲ. ಬರತಾನ, ಅರಮನಿ ಕಂಬ ಹಿಡಕೊಂಡು ಆಡತಾನ, ನಗ್ತಾನ, ಹಾಡ್ತಾನ, ಕ್ಯಾಕೇ ಹಾಕತಾನ, ಕಂಬಗಳೆಲ್ಲ ಅವನ ಜೋಡೀ ಮಾತಾಡ್ತಾವ..." ಅನ್ನುವ ಆಕೆಯ ನುಡಿ ಹೊಸ ಬದುಕಿನ ನಿರೀಕ್ಷೆಯೇ ಆಗಿದೆ.

ಆದರೆ ಸಿಂಗಾರವ್ವನ ವ್ಯಕ್ತಿತ್ವಕ್ಕೆ ಒಂದು tragic heroineನ ವ್ಯಕ್ತಿತ್ವವಿರುವಂತೆಯೇ ಒಂದು ಜಾನಪದ ಪಾತ್ರದ ಮೆರುಗೂ ಇದೆ. ಸಿಂಗಾರವ್ವನ ದುರಂತದ, ಯಾತನೆಯ ಅಸಂಗತತೆಯ ಪ್ರಶ್ನೆ ಜಾನಪದ ಬದುಕನ್ನು ತೀವ್ರವಾಗಿ ಕಾಡುವುದಿಲ್ಲ,

ಏಕೆಂದರ ಬದುಕನ್ನು ಈರೀತಿ ತಾರ್ಕಿಕವಾಗಿ ನೋಡಲು ಬೇಕಾಗುವ ಸೈದ್ಧಾಂತಿಕ ಚೌಕಟ್ಟು ಮತ್ತು ಈ ರೀತಿಯ ವಿಶ್ಲೇಷಣೆಯು ಒಂದಿರುವ ಹತಾಶೆ ಜಾನಪದ ಬದುಕಿಗಿಲ್ಲ. ಶೀನಿಂಗವ್ವ ಹಾಗೂ ಸಿಂಗಾರವ್ವನ ಪ್ರಕಾರವೂ ಕೂಡ ಇದು ಅವಳ ಕರ್ಮ. ಆದರೆ ಈ ಕರ್ಮದ ಪರಿಕಲ್ಪನೆಯೂ ಕೂಡ ಜಾನಪದೀಯವಲ್ಲ. ಅದು ವೈದಿಕತೆಯಿಂದ ಎರವಲು ಪಡೆದಿರುವಂತಹುದು. ಸಿಂಗಾರವ್ವ ಮತ್ತು ಶೀನಿಂಗವ್ವ ಈ ಪರಿಕಲ್ಪನೆಯನ್ನು ಸರಳವಾಗಿಯೇ ಬಳಸಿಕೊಳ್ಳುತ್ತಾರೆ. ಏಕೆಂದರೆ ಜಾನಪದೀಯ ಬದುಕಿಗೆ ಈ ಪ್ರಶ್ನೆ ತೀವ್ರವಾದ ಪ್ರಶ್ನೆಯಾಗಿಯೇ ಗೋಚರಿಸುವುದಿಲ್ಲ. ಜಾನಪದೀಯ ಬದುಕಿಗೆ ಸಿಂಗಾರವ್ವನ ಯಾತನೆಗಿಂತ ಹೆಚ್ಚು ಅವಳ ಅದಮ್ಯ ಜೀವಂತಿಕೆ, ಫಲವತ್ತತೆ, ಸೃಷ್ಟಿಶೀಲತೆಗಳು ಮುಖ್ಯವಾಗಿ ಕಾಣುತ್ತವೆ. ದೇಸಾಯಿಯಿಂದ ಗಂಡು ಮಗುವನ್ನು ಪಡೆದೇ ಪಡೆಯುತ್ತೇನೆಂದು ಪ್ರತಿಜ್ಞೆ ಮಾಡುವ ಸಿಂಗಾರವ್ವ ಅಥವ "....ಹಾಳುಮೂಳ ಜಂಗಮರೆಲ್ಲಾ ಅರಮನಿ ಮ್ಯಾಲ ಬೂದಿ ಹಾರಿಸಿದರು. ಅವರ ಮಾತ ವೀರಿ ನಿನ್ನ ಸುಡುಗಾಡ ಅರಮನ್ಯಾಗ ಮಕ್ಕಳ್ನ ಹುಟ್ಟಿಸಬೇಕಂತ ಹಟ ತೊಟ್ಟಿ. ಯಾಕಂದರ ನನ್ನ ಮೈಯಾಗ ಬೇಕಾದಷ್ಟು ಹುಟ್ಟಿಸೋ ಶಕ್ತಿ ಐತಿ. ನಿನs ಗಂಡಸಾಗಿದ್ದರ ಹಾ ಅನ್ನೊದರಾಗ ಈ ಅರಮನಿ ತುಂಬ ಮಕ್ಕಳ್ನ ಹಡಿತೀದ್ದೆ. ಆ ಮಕ್ಕಳೆಲ್ಲಾ ಅರಮನಿ ತುಂಬ ಗಲಗಲ ಗದ್ದಲ ಮಾಡಿಕೊಂತ ಆಡತಿದ್ದರ ಆಗ ನಿನ್ನ ಅರಮನೀ ಚಂದ ನೋಡಬೇಕಿತ್ತು. ಒಂದು, ಎರಡು ಹಡೆಯೋದಕ್ಕೆ ಹುಟ್ಟಿದವಳಲ್ಲೋ ನಾನು, ಸಾವಿರ ಮಕ್ಕಳ ತಾಯಿ" ಎನ್ನುವ ಸಿಂಗಾರವ್ವ ಅದಮ್ಯ ಜೀವಂತಿಕೆಯ, ಸೃಷ್ಟಿ ಶೀಲತೆಯ ಪ್ರತೀಕವಾಗುತ್ತಾಳೆ ಮತ್ತು ಆಕೆಯ ಅದಮ್ಯ ಜೀವಂತಿಕೆಯಿಂದಾಗಿಯೇ ಸಿಂಗಾರವ್ವ ಒಂದು myth ಆಗುತ್ತಾಳೆ. ಆಕೆಯನ್ನು ಒಂದು mythನ್ನಾಗಿಸಲು ಬೇಕಾಗುವ ಜಾನಪದ ಸೊಗಡು ಇನ್ನೂ ಕಾದಂಬರಿಗಿದೆ.

ಈ mythನ, ಪುರಾಣದ ಪ್ರಮುಖ ವೈಶಿಷ್ಟ್ಯವೆಂದರೆ ಅವುಗಳಲ್ಲಿ ಮನುಷ್ಯನ ಸಿಟ್ಟು, ಪ್ರೀತಿ, ದ್ವೇಷ ಇತ್ಯಾದಿಗಳು ಪವಾಡಗಳಾಗುವುದು ಮತ್ತು ಅವುಗಳಿಂದಲೇ ಇಡೀ ಬದುಕು ನಿರ್ಧರಿಸಲ್ಪಡುವ ಭ್ರಮೆಯುಂಟಾಗುವುದು. ಸಿಂಗಾರವ್ವನ ಫಲವತ್ತತೆಯ, ಜೀವಂತಿಕೆಯ ತೀವ್ರತೆ ಆಕೆಯ ವ್ಯಕ್ತಿತ್ವಕ್ಕೆ ಒಂದು ಜಾನಪದ mythನ ಮೆರುಗನ್ನು ಕೊಡುತ್ತದೆ. ನಮ್ಮ ಬದುಕು mythಗಳಾಗುವ ಗುಣವನ್ನು ಕಳೆದುಕೊಂಡಿರುವತ್ತ, ತೀರಾ prosaie ಆಗಿರುವತ್ತ ಸಿಂಗಾರವ್ವನ ವ್ಯಕ್ತಿತ್ವ ಬೆಟ್ಟುಮಾಡಿ ತೋರಿಸುತ್ತಿರುವಂತೆ ಕಾಣುತ್ತದೆ.

## ರಂಗಭೂಮಿ

# ಆಲ್ಕಾಜಿ ಮತ್ತು NSD ರೆಪರ್ಟರೀ ಯಾತ್ರೆ

**(13-2-92 ರಿಂದ 20-2-92)**

**— ಕ. ವೆಂ. ರಾಜಗೋಪಾಲ**

NSD ರೆಪರ್ಟರಿ ಕಂಪನಿಯು ಆರು ನಾಟಕಗಳು ರವೀಂದ್ರ ಕಲಾಕ್ಷೇತ್ರದಲ್ಲಿ (ಬೆಂಗಳೂರಿನಲ್ಲಿ) ಪ್ರದರ್ಶಿತವಾದುವು (ತಾ॥ 13-2-92 ರಿಂದ 20-2-92ರವರೆಗೆ). ಒಂದು ರಂಗಮಂಟಪ ಸಂಭ್ರಮದ ಹಬ್ಬವಾಯಿತು. ಇದರಲ್ಲಿ ಮೂರು ದೊಡ್ಡ ನಾಟಕಗಳನ್ನು ಸುಪ್ರಸಿದ್ಧ ಆಲ್ಕಾಜಿಯವರೇ ನಿರ್ದೇಶಿಸಿದ್ದು ಉಳಿದವನ್ನು ಅವರ ವಿದ್ಯಾರ್ಥಿಗಳಾಗಿದ್ದ ಸಮರ್ಥ ತರುಣರಿಂದ ನಿರ್ದೇಶಿತವಾಗಿದ್ದುವು. ಕಂಪನಿಯ ಮ್ಯಾನೇಜರ್ ಶ್ರೀ ಬಜಾಜ್ ಆದರೆ ಇತರ ಸಿದ್ಧತೆಗಳಿಗೆ ಶ್ರೀಮಂತಿ ಚಂದ್ರಾ ಜೈನ್ ನಿಂತಿದ್ದರು.

ಈ ಆರು ನಾಟಕಗಳೆಂದರೆ ಐದು ಹಿಂದಿಗೆ ಅನುವಾದಿತ ನಾಟಕಗಳು. 1) ರಕ್ತ ಕಲ್ಯಾಣ 2) ಕರ್ಮ್ಯಾವಾಲಿ 3) ಜೂಲಿಯಸ್ ಸೀಸರ್ 4) ಪ್ಯೂಜಿಯಾಮಾ 5) ದಿನ್ ಕೇ ಅಂಧೇರೆ ಮತ್ತು ಹಿಂದಿಯ ನಾಟಕ ಸೂರ್ಯ್ ಕೀ ಅಂತಿಮ್ ಕಿರಣ್‌ಸೇ ಸೂರ್ಯ್ ಕೀ ಪೆಹಲಿ ಕಿರಣ್ ತಕ್' ಎಂಬುದು. ಈ ಪ್ರದರ್ಶನಗಳು ಹಿಂದಿಯ ಸಮಾರಂಭದಂತೆ ಜರುಗಿದ ಕಾರಣ ಬೆಂಗಳೂರಿನ ಮಾಮೂಲು ರಂಗಪ್ರೇಕ್ಷಕರಿಗೆ 90 ಪಾಲು ಪೂರ್ಣವಾಗಿ ಅನುಸರಿಸಲಾಗದ ಭಾಷೆಯದಾಗಿತ್ತು. ಇದಕ್ಕೆ ಕಾರ್ನಾಡರ 'ತಲೆದಂಡ' ಮತ್ತು ಷೇಕ್ಸ್‌ಪಿಯರ್‌ನ 'ಜೂಲಿಯಸ್ ಸೀಸರ್' ಕೂಡ ಹೊರತಾಗಲಿಲ್ಲ, ಬಹುಶಃ ಇಂತಹ ರಿಸ್ಕನ್ನು ಬುದ್ಧಿಪೂರ್ವಕವಾಗಿಯೇ ತೆಗೆದುಕೊಂಡಿರುವುದನ್ನು ಪ್ರಶ್ನಿಸಬೇಕಾಗುತ್ತದೆ. ಇಂತಹ ಸಮಸ್ಯೆಯು ಬೆಂಗಳೂರಿಗೆ ಮಾತ್ರವಲ್ಲದೆ ಕಲ್ಕತ್ತಾ ರಂಗಪ್ರೇಕ್ಷಕರಿಗೂ ಆಗುವುದು ಸಾಧ್ಯ. ಇಂಥ ಹಿಂದಿಯ ವೈಭವದಿಂದ ನಮ್ಮ ರಾಷ್ಟ್ರೀಯ ರಂಗಭೂಮಿಗೆ ನ್ಯಾಯ ದೊರಕಿದಂತೆ ಆಗಲಾರದು. ಎನ್.ಎಸ್.ಡಿ. ರೆಪರ್ಟರಿ ಕಂಪನಿಯೆನ್ನುವಾಗ ದೇಶದ ಬೇರೆ ಬೇರೆ ಭಾಗಗಳಿಂದ ಬಂದು ತರಬೇತಿ ಪಡೆದವರು ಇಲ್ಲಿ ಅಭಿನಯ ಮತ್ತು ನಿರ್ದೇಶನ ಹಾಗೂ ಇತರೆ ರಂಗಕ್ರಿಯೆಗಳಲ್ಲಿ ಪಾಲುಗೊಳ್ಳುವರೆಂಬ ಒಂದೇ ಮನಸ್ಸಿಗೆ ಬರುವ ಸಮಾಧಾನವಾದೀತು.

ಆಲ್ಕಾಜಿಯವರು ಎನ್.ಎಸ್.ಡಿ.ಯ ಪ್ರಾರಂಭ ಕಾಲದಿಂದ ಅದರ ಅಸ್ತಿಭಾರದಿಂದ ಒಂದು ಗಟ್ಟಿಯಾದ ಕಟ್ಟಡವಾಗುವವರೆಗೂ ಮಾರ್ಗದರ್ಶಕರಾಗಿದ್ದು ಈಗ್ಗೆ 15 ವರ್ಷಗಳ ಹಿಂದೆ ಬಿಟ್ಟುಕೊಟ್ಟು ಚಿತ್ರಕಲೆಯ ಪ್ರದರ್ಶನಗಳಲ್ಲಿ ತೊಡಗಿದ್ದವರು–

---

ಕ.ವೆಂ. ರಾಜಗೋಪಾಲ, ಎಂ.ಐ.ಜಿ. 14, 80 ಅಡಿ ರಸ್ತೆ, ಕೆಂಗೇರಿ ಉಪನಗರ, ಬೆಂಗಳೂರು-56

ಈಗ ಮರಳಿ ಬಂದು ಎನ್.ಎಸ್.ಡಿ. ರೆಪರ್ಟರಿಯ ನೇತೃತ್ವವನ್ನು ವಹಿಸಿಕೊಂಡಿರುವುದು ಒಂದು ಸಂತೋಷದ ವಿಷಯವಾದರೂ ಅವರ ಈಗಿನ ಮೂರು ನಾಟಕಗಳು ಅಂಥ ಯಶಸ್ಸನ್ನು ಗಳಿಸಿರುವುದಿಲ್ಲ. ಇದಕ್ಕೆ ಕಾರಣಗಳು ಮೂರು ನಾಲ್ಕಿರಬಹುದು. 15 ವರ್ಷಗಳ ದೀರ್ಘ ಅವಧಿಯಲ್ಲಿ ನಾಟ್ಯಕ್ಕೆ ಬೆನ್ನು ತಿರುಗಿಸಿದ್ದಂತೆ ಕಾಣುವುದಂತೂ ಮುಖ್ಯ.

ಇಲ್ಲಿ ಅಲ್ಕಾಜಿಯವರ ಪ್ರಾಮಾಣಿಕತೆ 'ರಾಷ್ಟ್ರ ರಂಗಭೂಮಿ'ಯ ಕಾಳಜಿ ಕಲಾಭಿಜ್ಞತೆ – ಇವುಗಳನ್ನು ಇಂದಿಗೂ ನಾವು ನೆನೆಯಬಹುದು. ಅವರಿಂದಲೇ ಬೆಂಗಳೂರಿನ ನಾಟ್ಯ ಪ್ರೇಮಿಗಳು ಇಂದಿಗೂ ಈ ಫೆಸ್ಟಿವಲ್‌ನ ಯಶಸ್ಸಿಗೆ ಕಾರಣರಾಗಿದ್ದರೆಂದು ಹೇಳಬಹುದು. ಬೆಂಗಳೂರಿನ ವಿಲಾಸಿ ತಂಡಗಳೆಲ್ಲವೂ ಈ ಹಬ್ಬದಿಂದ ಲಾಭ ಪಡೆಯುಕೊಳ್ಳಲು ಆಸಕ್ತಿ ವಹಿಸಿದ್ದರಿಂದಲೇ ಈ ಎನ್.ಎಸ್.ಡಿ. ರೆಪರ್ಟರಿಯ ಈ ಪ್ರದರ್ಶನಗಳು ಹಣದ ದೃಷ್ಟಿಯಿಂದ ಗೆದ್ದಿವೆ. ಟಿಕೆಟ್ಟಿನ ದರ 50 ರೂ. 30 ರೂ. 20 ರೂ. – ಹೀಗಿದ್ದರೂ ಪ್ರೇಕ್ಷಕರು ಗೊಣಗಿದ್ದುದಿಲ್ಲ. ಕಣ್ಣು ಬಾಯಿ ತೆರೆದಂತೆ ನಾಟಕಗಳನ್ನು ವೀಕ್ಷಿಸಿದ್ದಾರೆ.

ಈ ಆರು ನಾಟಕಗಳಲ್ಲಿ ಪ್ರಸನ್ನರ ನಿರ್ದೇಶನದಲ್ಲಿ ಬೆಳಕು ಕಂಡ 'ಘ್ಯಾಜಿಯಾಮಾ' ನಿಜಕ್ಕೂ ಹಬ್ಬದ ನಂತರವೂ ಕಾಡುವಂಥ ಅರ್ಥವಂತಿಕೆಯನ್ನು ಪಡೆದದ್ದಾಗಿದೆ. ಅದಕ್ಕೆ ಉಳಿದವರ ಆಡಂಬರವಿಲ್ಲ; ಪ್ರಾರಂಭದಲ್ಲಿನ ಎಕ್ಸೈಟ್‌ಮೆಂಟಿಲ್ಲ. ತೀರ ಸರಳವಾದಂತೆ–'ಘ್ಯಾಜಿ ಅಪ್ಪ' ಎನ್ನಿಸಿಕೊಂಡೆ–ಎಂಬ ಜೋಕಿನಿಂದ ಮೊದಲಾದುದು ಅನೇಕ ಸಟಲ್ ಜೋಕುಗಳನ್ನು ಕಳೆದುಕೊಳ್ಳುತ್ತಾ ಇನ್ನೇನು ನಿರಾಶೆಯ ಹಂತದಲ್ಲಿ ನಿಂತಂತೆ ಕಾಣುತ್ತಿದ್ದಂತೆಯೇ ಮರೆಯಲಾಗದ ತಿರುವಿನಿಂದಾಗಿ ಪ್ರೇಕ್ಷಕರನ್ನು ಎತ್ತರಕ್ಕೆ ತಲೆ ಚಾಚುವಂತೆ ಮಾಡಿರುತ್ತದೆ. ಆದರ ಮುಖ್ಯ ವಸ್ತುವು ಧ್ವನಿಸಿದುದರಲ್ಲಿ ಅಂತಹ ಸತ್ವವೊಂದು ಹುದುಗಿರುವುದಲ್ಲದೆ ಇದನ್ನು ಹ್ಯಾಂಡಲ್ ಮಾಡಿದ ಪ್ರಸನ್ನರ ಕೈವಾಡಕ್ಕೆ ಮ್ಯಾಜಿಕ್ ಬ್ಯಾಂಡ್‌ನ ಶಕ್ತಿಯಿದೆ–ಇಡೀ ಹಬ್ಬದಲ್ಲಿ. ಈ ಅನುಭವವು ಈ ತರುಣ ನಿರ್ದೇಶಕನನ್ನು ಬೆಂಗಳೂರಿಗೆ ಹಿಂದಿರುಗಲೆಂದು ನಮ್ಮ ವಿಲಾಸಿ ಸಂಸ್ಥೆಗಳಲ್ಲಿ ಒಂದೆಡಾದರೂ ಕರೆ ನೀಡಬಹುದು. ಈ ಪ್ರದರ್ಶನವು ಪ್ರಸನ್ನರ ಹಿಂದಿನ ನಿರ್ದೇಶನ–ಪ್ರದರ್ಶನಗಳಿಗಿಂತಲೂ ಹೆಚ್ಚು ಯಶಸ್ವಿಯಾದುದು– ಎಂದರೆ ಕೊಂಚ ಮುಗ್ಧತೆ ಬೆರೆತರೂ ತಪ್ಪಾಗಲಾರದು.

ಎರಡನೆಯ ಮತ್ತು ಒಂದು ರೀತಿಯಲ್ಲಿ ಸಫಲತೆಯನ್ನು ಪಡೆದುಕೊಂಡ ನಾಟಕವೆಂದರೆ ವರ್ಮರ ಸೂರ್ಯ್ ಕೀ ಅಂತಿಮ್ ಕಿರಣ್ ಸೇ ಸೂರ್ಯ್ ಕೀ ಪೆಹಲಿ ಕಿರಣ್ ತಕ್–ಎಂಬ ಸುಮಾರು 18–20 ವರ್ಷಗಳ ಹಿಂದೆಯೆ ಕನ್ನಡದಲ್ಲಿ ಅನುವಾದಿತವೂ ಪ್ರದರ್ಶಿತವೂ ಆದ ಕೃತಿ. ಇಂದಿಗೂ ಇದು ತನ್ನ ನಾಟ್ಯ ಸಾಮರ್ಥ್ಯದಲ್ಲಿ ಸಂತ ಜೆನೆ

ಯನ್ನು ನೆನಪಿಗೆ ತರಬಲ್ಲ ಹಿಂದೀ ಕೃತಿಯಾಗಿದೆ–ಇದರ ಪ್ರದರ್ಶನ ಸಾರ್ಥಕ್ಯವೇ ಒಂದು 'ಸವಾಲ'ನ್ನು ಒಡ್ಡುತ್ತದೆ. ಇದರ ಪ್ರಧಾನ ಪಾತ್ರಧಾರಿಣಿ ಶೀಲವತೀ (ಹೇಮಾಸಿಂಗ್) ಅಭಿನಯದಲ್ಲಿ ಅದರ ಸಾಧ್ಯತೆಗಳೇ ಹೆಚ್ಚಾಗಿ ಉಳಿಯುವಂಥದು. ದೆಹಲಿಯಲ್ಲಿ ಒಮ್ಮೆ ಇಂಟಿಮೇಟ್ ಥಿಯೇಟರ್ ಪ್ರದರ್ಶನವನ್ನು ನೋಡಿದವರೂ ಒಪ್ಪುತ್ತಾರೆ–ಈ ಪಾತ್ರದ ಡೈಮೆನ್ಷನ್ಸ್ ಭಾರತೀಯ ನಾಟಕಗಳಲ್ಲಿ ತುಂಬ ಅಪರೂಪ–ಇಲ್ಲವೆಂದರೂ ತಪ್ಪಾಗಲಾರದು. ಸಂಗೀತ ನಾಟಕದಲ್ಲಿನ ದ್ರೌಪದಿ ಪಾತ್ರಣ ಹೆಚ್ಚಿನ ಸಂಕೀರ್ಣವಾದ ಪಾತ್ರವಾಗಿದೆ–ಆದುದರಿಂದ ಇದು ರೂಪಕವಾದ ಮೇಲೆ ಎರಡು ದಶಕಗಳು ದಾಟಿದ ಮೇಲೂ ಇದರ ಹಸಿರು ಧ್ವಜ ಹಾರಾಡುತ್ತಿದೆ. ಇದಕ್ಕೆ ಅಭಿನೇತ್ರಿಗಳ ಪರಂಪರೆಯಲ್ಲಿ ಕೂಡ ಸವಾಲಾಗಿ ಉಳಿಯುವ ಶಕ್ತಿಯಿದೆ. ಹೇಮಾ ಸಿಂಗ್ ಈ ಅಭಿನಯದ ನಿಲುವನ್ನು ಅರಿತವರಂತೆ ಕಂಡುಬಂದರೂ ಅವರ ನಿಜವಾದ ಸವಾಲಿನ ಹಂತದಲ್ಲಿ–ಪ್ರೇಕ್ಷಕರಲ್ಲಿ ಒಬ್ಬೊಬ್ಬರ ಕೆನ್ನೆಗೂ ಬಾರಿಸಿದಂತೆ ಆಗುತ್ತದೆ. ಪಾತ್ರದ ಸಂಕೀರ್ಣತೆಯನ್ನು ಒಂದಾಯದ ಎಲ್ಲ ಅಂಶಗಳನ್ನು ಅಭಿನಯಿಸಬೇಕಾಗು ತ್ತದೆ–ಅದೇ ಹಂತದಲ್ಲಿ ಹೇಮಾಸಿಂಗ್ ಕೊಂಚದರಲ್ಲಿ ತಮ್ಮ ಸದವಕಾಶವನ್ನು ಬಿಟ್ಟು ಕೊಟ್ಟಂತೆ ಆಯಿತು. ಆದರೂ ಈ ಕೃತಿಯ ನಾಟಕಕಾರನು ಪ್ರೇಕ್ಷಕರ ಮನಸ್ಸಿನಲ್ಲಿ ಒಡಮೂಡಿದಂತೆ ಆಯಿತೆನ್ನಬಹುದು.

ಮತ್ತೊಂದು ನಾಟಿಕ 'ಕಪೂರ್ವಾಲೀ' (ಕಾಶ್ಮೀರಿಯಿಂದ ಅನುವಾದಿತ) ಪ್ರೇಕ್ಷಕರನ್ನು ಜಾಗೃತಗೊಳಿಸುವಂಥದು. 40 ವರ್ಷಗಳ ನಂತರವೂ ಪಾಕಿಸ್ತಾನ ಮತ್ತು ಭಾರತದ ನಡುವಿನ 'ಗೆರೆ'ಯೊಂದು ವಿಭಜನೆಯಲ್ಲಿ ಮೂಡಿದ ಕೀವು ಗುರುತಾಗಿದೆ. ಇದರಲ್ಲಿ ಬದಲಾವಣೆ ಆಗುವುದಿಲ್ಲವೇ? ಎಂದು ನಾಟಕವು ಎಚ್ಚರಿಸು ತ್ತದೆ. ಆದುದರಿಂದ ವಾಸ್ತವವಾಗಿ 'ಮೆಲೋಡ್ರಾಮಾ'ಭರಿತವಾಗಿದ್ದು ನಿರ್ದೇಶಕ ನನ್ನು ಸವಾಲಿಸಬಲ್ಲುದಾಗಿದೆ. ರೈನಾ ಈ ಪ್ರಯತ್ನದಲ್ಲಿ ತುಂಬ ಎಚ್ಚರಿಕೆಯಿಂದ ಪರಿಣಾಮವನ್ನು ವಿಚಾರವಂತಿಕೆಗೆ ತಂದಿದ್ದಾರೆ. ಮೂಲದಲ್ಲಿ ಇದೊಂದು ಕಾಶ್ಮೀರಿ ಕಾದಂಬರಿಯಾಗಿದ್ದುದರಿಂದ ನಿಜವಾದ ನಾಟಕ–ರೂಪಕಗಳ ಸ್ಟ್ರಕ್ಚರ್ ಇಲ್ಲದಂತಾಗಿದೆ. ಆದರೆ ಇಂಥ ರಾಷ್ಟ್ರೀಯ ಜೀವಂತ ಸಮಸ್ಯೆಯನ್ನು ಒಡಮೂಡಿಸುವುದರಿಂದ ಪ್ರದರ್ಶನಕ್ಕೆ 'ನ್ಯಾಯ'ವನ್ನು ದೊರಕಿಸಿದಂತೆ ಆಗಿದೆ. ಒಟ್ಟಿನಲ್ಲಿ ಇದರ ಪ್ರದರ್ಶನ ಕ್ಕಾಗಿ ರೈನಾ ಹೊಗಳಿಕೆಗೆ ತಕ್ಕವರು.

ಈ ಉತ್ಸವದಲ್ಲಿ ಸಿಂಹಪಾಲು ಅಲ್ಕಾಜಿಯವರಿಗೆ ಎನ್ನುವಂತೆ ಮೂರು ದೊಡ್ಡ ನಾಟಕಗಳನ್ನು ಅವರು ನಿರ್ದೇಶಿಸಿದ್ದಾರೆ. ಮೊದಲನೆಯದೇ ರಕ್ತಕಲ್ಯಾಣ ಅಥವಾ ತಲೆದಂಡ (ಗಿರೀಶ್ ಕಾರ್ನಾಡರ ಕೃತಿ) ಇದರ ಪ್ರಯೋಗಗಳು ಈವರೆಗೂ ಅಲ್ಕಾಜಿ ಯವರದೂ ಸೇರಿ ಪೂರ್ಣ ಯಶಸ್ವಿಯಾಗಿರುವುದಿಲ್ಲ. ಇದಕ್ಕೆ ಕಾರಣಗಳನ್ನು ಕೃತಿ

ಯಲ್ಲಿಯೇ ಹುಡುಕುವಂತಾಗಿದೆ. ಆದರೆ ಅಲ್ಕಾಜಿಯವರ ಪ್ರಯೋಗದಲ್ಲಿ ಅನುವಾದವು ಒಳ್ಳೆಯದಾಗಿದ್ದೂ ಮುಖ್ಯ ಪಾತ್ರಗಳಲ್ಲಿ ಎರಡನೇದಾದ 'ಬಸವಣ್ಣ' ಒಬ್ಬ ಪರಿವ್ರಾಜಕನದಂತೆ ಆದುದರಿಂದ ಕನ್ನಡಿಗರಿಗೆ ಯಾರಿಗೂ ಅಸಮಾಧಾನಕರ ವಾಯಿತು. ಅಲ್ಲದೆ ವಾಸ್ತವವಾಗಿ ಸಂತ ಕಬೀರನಂತೆ ಹಿಂದಿಯವರಿಗೆ ಕಾಣಬೇಕಾಗಿದ್ದ ಈ ಪಾತ್ರವು ಹೀಗಾದುದರಿಂದ ಮತ್ತು ವಚನಗಳ ಸತ್ವವೇ ತಿಳಿಯದವರಾದಂತೆ ಆದುದರಿಂದ ಇಡೀ ಪ್ರಯೋಗವು ದುರ್ಬಲವಾಯಿತು. ಯಶಸ್ವಿಯಾದ ಪಾತ್ರ ಗಳೆಂದರೆ ಬಿಜ್ಜಳ ಮತ್ತು ಸೋಯಿದೇವ. ಸ್ತ್ರೀಪಾತ್ರಗಳು ನಾಟಕದಲ್ಲಿಯೇ ಎರಡನೆಯ ಪ್ರಾಮುಖ್ಯವನ್ನು ಪಡೆದಂತಿರುವುದಿಲ್ಲ. ಇದ್ದುದರಲ್ಲಿ ರಾಣಿಯಾದ ರಂಭಾ ಕೇವಲ 'ರಮಂತೆ'ಗೆ ಮತ್ತು ತಾಯಿತನಕ್ಕೆ ಕ್ಲೀಶೆಯಂತೆ ಕಂಡುಬರುತ್ತಾಳೆ. ಇಡೀ ನಾಟಕದಲ್ಲಿ ಇಬ್ಬರು ಮಕ್ಕಳ ಅಂತರಜಾತೀಯ ವಿವಾಹದ ವಿಷಯವೇ ಕೇಂದ್ರವಾಗಿದ್ದು ಅಲ್ಲಿಯೂ ಪುರುಷ 'ಶೀಲವಂತ'ನಿಗೆ ಪ್ರಾತಿನಿಧ್ಯತೆ ಸಿಕ್ಕುತ್ತದೆ. ವಧುವಾದವಳನ್ನು ಮುಖ್ಯ ಸಂದರ್ಭದಲ್ಲಿಯೇ ನಿವಾರಿಸಿದಂತೆ ಆಗುತ್ತದೆ. ಇದರಲ್ಲಿ ನಾಟಕದ ಕೇಂದ್ರ ವಾದ 'ಕ್ರಾಂತಿ'ಯ ಬೀಜವಿದೆಯೆಂಬುದನ್ನು ನಾಟಕಕಾರರು ತಿಳಿದೂ ದೃಶ್ಯರಚನೆಯಲ್ಲಿ ಇದನ್ನು ಮಧ್ಯಕ್ಕೇ ಸೇರಿಸಿದುದರಿಂದ ಅದರ ಪ್ರಧಾನತೆಗೇ ಕುಂದು ಬಂದಂತಾಗಿದೆ. ನಾಟಕವು ಪ್ರಾರಂಭವಾಗುವುದು - ಬಿಜ್ಜಳನ ಸಾವನ್ನು (ದುರಂತವನ್ನು ಕುರಿತಂತೆ ಬ್ರಾಹ್ಮಣನ ಶಾಪಕ್ಕೆ ಹತ್ತಿರವೆನ್ನುವಂತೆ) ಬೆರಳುಮಾಡಿ ತೋರಿಸಿದಂತೆ ಜಗದೇವನನ್ನು ಅವನ ತಂದೆಯೇ ನಿರಾಕರಿಸುವುದಾಗಿದೆ. ಒಟ್ಟಿನಲ್ಲಿ 12ನೇ ಶತಮಾನದ ಬ್ರಾಹ್ಮಣ ಸಮಾಜದ ಒಂದು ತುಣುಕು ಈ ನಾಟಕದ ಮುಖ್ಯ ಅಂಶವೂ ಆಗುತ್ತದೆ. ಆದುದರಿಂದ ದುಂಗೆಕೋರನಾಗಿ ಜಗದೇವನು ಕಂಡುಬರುವುದಲ್ಲದೆ ಬಸವಣ್ಣನೂ ಕ್ರಾಂತಿಕಾರಿಯಾದರು ಬಿಜ್ಜಳನ ದುರಂತಕ್ಕೆ ಮುಖ್ಯ ಕಾರಣನಾಗದೆ ಜಗದೇವನ ವೈಯುಕ್ತಿಕ ಸೇಡು ಕಾರಣ ವಾಗುತ್ತದೆ. ಇಂತಹ ನಾಟಕೀಯ ಶಿಫ್ಟಿನಿಂದಾಗಿ ಅಲ್ಕಾಜಿಯವರಿಗೆ, ಬಸವಣ್ಣನು ಬಿಜ್ಜಳನಷ್ಟೇ ಪ್ರಮುಖವಾದರೂ ವ್ಯಕ್ತಿತ್ವವು ಸಫಲ ರೂಪ ತಾಳಿದಂತಿಲ್ಲ. ಆದರ ಬಸವಣ್ಣನ ಅಂತ್ಯವನ್ನು ತುಂಬ ಸೊಗಸಾಗಿ ಗಂಭೀರವಾಗಿ ಪರಿಗಣಿಸಿ ಅದಕ್ಕೆ ತಕ್ಕಂತೆ ಸಂಗಮ ಪ್ರವೇಶದ ಪರಿಣಾಮವನ್ನು ತೋರಿಸಿದ್ದಾರೆ. ಇಲ್ಲಿ ಬಸವಣ್ಣನವರ ವಚನ ಗಳೂ ತಮ್ಮ ಜೀವಂತತನವನ್ನು ಕಳೆದುಕೊಂಡಂತೆ ಆಗಿವೆ. ಆದರೆ ಬಿಜ್ಜಳನ ಪಾತ್ರದಲ್ಲಿ ಗೆಲುವೂ ಅವನ ಕೊನೆಯನ್ನು ಸೀಸರನ ಕೊಲೆಗೆ ಸಮಾನವೆನ್ನುವಂತೆ ಸಾಧಿಸಿದಂತಾಗಿದೆ. ಒಟ್ಟಿನಲ್ಲಿ ಅಲ್ಕಾಜಿಯವರ ಬಿಜ್ಜಳನ ಪಾತ್ರವು ಗಂಭೀರವಾಗಿ ತಕ್ಕ ಯೋಗ್ಯತೆಯಿಂದ ರೂಪಿತವಾಗಿದೆ. ಅವನ ಕೊನೆಯ ಹತ್ತಿರಕ್ಕೆನ್ನುವಂತೆ ಒಂದು ವಚನ ಕೂಡ ಲಿರಿಕಲ್ ಆಗಿದ್ದು ಪಾತ್ರದ ನಿಲುವನ್ನು ಸಮರ್ಥಿಸುತ್ತದೆ.

ಪ್ರಯೋಗದಲ್ಲಿ ಅಲ್ಕಾಜಿಯವರ ಕ್ಲಾಸಿಕಲ್ ಮುದ್ರೆಯಿದ್ದರೂ ಬಸವಣ್ಣನ ಪಾತ್ರಧಾರಿ ಕೂಡ ಒಂದು ಬಗೆಯಲ್ಲಿ ಅಸಹಜವಾದ ಲಯವನ್ನು ಪಲುಕಿಸುವಂತೆ ಮಾತನಾಡುವುದರಿಂದ ಈ ಪಾತ್ರಕ್ಕೆ ಅನ್ಯಾಯ ಮಾಡಿದಂತೆ ಆಗಿದೆ. ಮೂರು ನಾಲ್ಕು ಆವರಣಗಳಲ್ಲಿ ರೂಪಿತವಾಗಿರುವ ಈ ನಾಟಕವನ್ನು ಕಾರ್ನಾಡರು ಮಕ್ಕಳ ಮದುವೆಯ ಸಂದರ್ಭದಿಂದಲೇ ಪ್ರಾರಂಭಿಸಿದ್ದಲ್ಲಿ ಇದರ ಮುಖ್ಯ ವಸ್ತುವಿಗೆ ತೀಕ್ಷ್ಣತೆಯು ಸೇರುವಂತಾಗುತ್ತಿತ್ತೆಂಬ ಅನುಮಾನವನ್ನು ಇಲ್ಲಿ ಹೇಳಬಹುದಾಗಿದೆ. ಜಗದೇವನ ತಂದೆ ಮತ್ತು ಈ ಮಗನ ಪರಿಸ್ಥಿತಿಯನ್ನು ನೆನಪಿಗೆ ತರುವಂತೆಯೇ ಬಿಜ್ಜಳನು ತನ್ನ ಕೊನೆಯಲ್ಲಿ ಜಗದೇವನನ್ನು ಸೋಯಿದೇವನೆಂದು ವಾತ್ಸಲ್ಯದಿಂದ ಕರೆಯುವ ಸ್ಥಿತಿ ಆಗಿರುವುದೂ ಕೂಡ 'ಕ್ರಾಂತಿಬೀಜ'ವಾದ 'ಅಂತರಜಾತಿ ವಿವಾಹ'ಕ್ಕೆ ಅದರ ಸತ್ವದಿಂದ ಮುಚ್ಚಿದಂತೆ ಆಗುತ್ತದೆ–ಹಿಂದೆಯೇ ಕೆಲವು ಅನವಶ್ಯಕ ಪ್ರಶ್ನೆಗಳಿಗೆ ಎಡೆಕೊಡುವಲ್ಲಿ ಈ ರಚನೆಯು ನಿಜವಾದ 'ತಲೆದಂಡ'ವಾಗದೆ ಬಿಜ್ಜಳನ ದುರಂತಕ್ಕೂ ಸರಿಯಾದ ನ್ಯಾಯ ದೊರಕದಂತೆ ಆಗುತ್ತದೆ. ಆದರೂ ಬಿಜ್ಜಳನ ಪಾತ್ರವನ್ನು ಅಲ್ಕಾಜಿಯವರು ಗಂಭೀರ ಪಾತ್ರವನ್ನಾಗಿಸಿ ಈ ನಾಟಕಕ್ಕೆ ಜೀವದಾನ ಮಾಡಿದ್ದಾರೆ.

ಈ ನಾಟಕವು ತನ್ನ ರಚನೆಯಲ್ಲಿ 'ತುಘಲಕ್' ಅಷ್ಟು ಗಟ್ಟಿಯಾಗಿದ್ದರೆ ಬಹುಶಃ ಕಾರ್ನಾಡರನ್ನು ನಾವು ಪ್ರದರ್ಶನಗಳ ಸೋಲಿನಲ್ಲೂ ಮೆಚ್ಚಬೇಕಾಗುತ್ತಿತ್ತು. ಆದರೆ ಈಗಿರುವಂತೆ 'ತಲೆದಂಡ'ವು ಇಂದಿನ ಜಾತೀಯ ಗೊಂದಲ ವಿಚಾರಗಳನ್ನು ಪ್ರತಿನಿಧಿಸುವಂತೆಯೂ ಆಗಿದೆ. ಜೊತೆಗೆ ರಾಜಕೀಯವನ್ನು ಕಾಡುತ್ತಿರುವ ರೂಪಿಸುತ್ತಿರುವ ಆರ್ಥಿಕ ಪರಿಸ್ಥಿತಿಯೂ ಇದರಲ್ಲಿ ಅಲ್ಲಲ್ಲಿ ಹೊಳೆಯುತ್ತದೆ. ಈ ಬಗೆಗೆ ಬೆನ್ನುಮೂಳೆಯಾಗಿರಬೇಕಾಗಿದ್ದ ಅಂಶ ಮಾತ್ರ ದುರ್ಬಲವಾಗಿದೆಯೆಂದು ಹೇಳಬಹುದು. ಆದರೂ ಕಾರ್ನಾಡರು ಭಾಷೆಯನ್ನು ನಾಟಕದಲ್ಲಿ ಬಳಸುವ ಚಾತುರ್ಯದಿಂದ ಉಳಿದ ಇಂದಿನ ನಾಟಕಕಾರರಲ್ಲಿ ಮುಂದಾಳಾಗಿ ನಿಲ್ಲುತ್ತಾರೆ ಮತ್ತು ಮುಂದೆ ಇನ್ನು ಒಳ್ಳೆಯ ನಾಟಕ ರಚಿಸಬಹುದೆಂಬ ಆಶಾವಾದಕ್ಕೆ ನೆರವಾಗುತ್ತಿದ್ದಾರೆ. ಒಟ್ಟಿನಲ್ಲಿ ಈ ನಾಟಕದ ಪ್ರದರ್ಶನದಲ್ಲಿ ಅಲ್ಕಾಜಿಯವರ ಸೋಲನ್ನು ಗುರುತಿಸುವಂತೆಯೇ ಕಾರ್ನಾಡರ ದುರ್ಬಲ ರಚನೆಯನ್ನು ಗುರುತಿಸುವಂತಾಗಿದೆ.

ತುಂಬ ಸಮರ್ಥ ಅನುವಾದವಾಗಿರುವ ಜೂಲಿಯಸ್ ಸೀಸರ್ – ನಾಟಕ ಪ್ರದರ್ಶನವೂ ರಕ್ತಕಲ್ಯಾಣದಂತೆ ಎರಡು ಪ್ರದರ್ಶನಗಳಾದುವು. ಮೊದಲ ಬಾರಿ ಪರದೆಯೇಳುತ್ತಿದ್ದಂತೆಯೇ ರೋಮಾಂಚನಕಾರಿ ಸೆಟ್ಟಿಂಗ್ ಮತ್ತು ಸೈನ್ಯದ ಕಹಳೆಗಳ ಸದ್ದು–ಮೂರು ಅಂಕಗಳು ಮುಗಿಯುತನಕವೂ ಈ ಎಕ್ಸೈಟ್‌ಮೆಂಟಿನ ಅವಧಿ. ವಾಸ್ತವವಾಗಿ ಹಾಕಿದ್ದ ಸೆಟ್ಸ್ - ರೋಮನ್ ವೈಭವವನ್ನು ತೋರಿಸುವಂಥದು. ನಿಜಕ್ಕೂ ಇಂಥ ಔಚಿತ್ಯಕ್ಕೆ ರವೀಂದ್ರ ಕಲಾಕ್ಷೇತ್ರದ ಪ್ರೇಕ್ಷಾಗೃಹ ಕಿರಿದು–ನಾಲ್ಕೈದು ಸಾವಿರ

ವಾದರೂ ಪ್ರೇಕ್ಷಕರಿದ್ದಲ್ಲಿ ಇದರ ಸಾರ್ಥಕತೆಯಾದೀತು. ಬಿಜ್ಜಳನ ಪಾತ್ರಧಾರಿಯೇ ಇಲ್ಲಿಯೂ ಸೀಸರ್ (ಒಮ್ಮೊಮ್ಮೆ ಸೈಜರ್) ಒಳ್ಳೆಯ ನಟನಾಗಿ ಉಳಿದವರಲ್ಲಿ ಕಂಡು ಬಂದರೆ ಕ್ಯಾಸಿಯಸ್ ಪಾತ್ರಧಾರಿಯು ಹೆಚ್ಚಿನ ಸಾಮರ್ಥ್ಯವನ್ನು ತೋರಿದ್ದಾನೆ. ರವೀಂದ್ರ ಕಲಾಕ್ಷೇತ್ರದ ಮುಂದಿನ ಮೆಟ್ಟಿಲು—ಅದಕ್ಕೆ ಹಿಂದೆ ನಾಲ್ಕು ಧಡೂತಿಯ ರೋಮನ್ ಕಂಬಗಳು ಇಡೀ ನಾಟಕಕ್ಕೆಲ್ಲಾ ಇದೇ ನೆಲಗಟ್ಟು—ಮೂರನೇ ಅಂಕದ ನಂತರ ವಿರಾಮವನ್ನು ಕೊಟ್ಟ ಕಾರಣದಿಂದಲೆನ್ನುವಂತೆ ಬ್ರೂಟಸ್ ಪಾತ್ರಧಾರಿಯು ಮುಕ್ಕಾಗಿ ಕಾಣುತ್ತಾನೆ. ವಾಸ್ತವವಾಗಿ ಈ ಪಾತ್ರಧಾರಿಯೇ (ಬಸವಣ್ಣನಾಗಿದ್ದವನು) ಈ ನಾಟಕದ ಪ್ರದರ್ಶನದ ಸೋಲಿಗೂ ಕಾರಣನಾದವನು - ಬ್ರೂಟಸ್ ಪಾತ್ರದಲ್ಲಿ ನಾವು ಕಂಡಿರುವಂತೆ ಬೇರೆ ಯಾರೂ ಮಾಡದಿರದ ತಪ್ಪೆನ್ನುವಂತೆ ಇಲ್ಲಿ ಬ್ರೂಟಸ್ ಸಾಮಾನ್ಯ ಜನತೆಯನ್ನು ಹಂಗಿಸುವಂತೆ ನಡೆದುಕೊಳ್ಳುತ್ತಾನೆ. ಅಲ್ಲದೆ ಈತನ ಮಾತಿನಲ್ಲಿ ಅನವಶ್ಯಕವೆನ್ನಬಹುದಾದ ಗತ್ತಿನ ಯಾಂತ್ರಿಕತೆಯ ರೀತಿ ಕೂಡ ಸೇರಿದಂತೆ ದುರ್ಬಲವಾಗುತ್ತದೆ. ನೋಬಲ್ ಬ್ರೂಟಸ್ - ಎಂಬ ಆಂಟೋನಿಯ ಹೇಳಿಕೆಯನ್ನು ಸುಳ್ಳು ಮಾಡಿಸಿದಂತೆ ಇಲ್ಲಿಯ ಬ್ರೂಟಸ್ ಪಾತ್ರಧಾರಿಯು ನೀಡಿದ ಅಭಿನಯವಾಗಿ ಪ್ರಶ್ನಿಸಬೇಕಾಯಿತು. ಇದರಿಂದ ನಾಲ್ಕು ಮತ್ತು ಐದನೇ ಅಂಕಗಳಲ್ಲಿ ಬಿಗಿತಪ್ಪಿ ದುರಂತ ಚಿತ್ರಣವು ಸತ್ವವನ್ನು ಕಳೆದುಕೊಂಡಂತೆ ಆಯಿತು.

ಜಗತ್ಪ್ರಸಿದ್ಧ ದುರಂತ ನಾಟಕಗಳಲ್ಲಿ ಜೂಲಿಯಸ್ ಸೀಸರ್ ಹೀಗೆ ಸೋಲಲು ಸರಿಯಾದ ಕಾರಣವನ್ನು ಕೂಡ ಕಷ್ಟವಾದಂತೆ ಅಲ್ಕಾಜಿಯವರ ಸಾಹಸವಾಗಿದ್ದೆ ಇಂತಹ ಸೋಲಿಗೆ ಅವರ ಮಾರ್ಗದ ದೌರ್ಬಲ್ಯವೇ ಒಂದು ಕಾರಣವಾಗುತ್ತಿದೆ.

ಹಬ್ಬದ ಕೊನೆಯ ನಾಟಕವಾಗಿ ಅಲ್ಕಾಜಿಯವರ ನಿರ್ದೇಶನದಲ್ಲಿ ಲೋರ್ಕನ ಹೌಸ್ ಆಫ್ ಬರ್ನಾರ್ಡ್ ಆಬ್ಬ—ದ ರೂಪಾಂತರ 'ದಿನ್ ಕೆ ಅಂಧೇರೆ'—ಪ್ರೇಕ್ಷಕರನ್ನು ಸೆಳೆಯಿತು. ಈ ರೂಪಾಂತರದಲ್ಲಿ ಮೂಲದ ನಾಟ್ಯಕ್ರಿಯೆಯು ಅಚ್ಚಳಿಯದಂತೆ ಉಳಿದಿದ್ದರೂ ಧರ್ಮಾಂತರವು ಈ ಕೃತಿಯಲ್ಲಿ ಮನಸೆಳೆಯುತ್ತದೆ. ಪ್ರಾರಂಭ ದಲ್ಲಿಯೇ ಮನೆಯ ಹಿರಿಯ ದಾಸಿಯು ತೋರುವ ಜಾಣ್ಮೆಯಿಂದಾಗಿ ತಕ್ಷಣದ ಅಭಿನಯವು ಹೆಚ್ಚಿನ ಒತ್ತು ಪಡೆದಂತೆ ಆಗುವುದಲ್ಲದೆ ಒಂದು ಪಟ್ಟು ಮೇಲೋ ಡ್ರಾಮಾ ಆಗುತ್ತದೆ. ಇದರಿಂದಾಗಿ ಮುಂದೆ ಎರಡು ಅಂಕಗಳು ಪೂರ್ತಿ ಇದರ ಮಹಿಮೆಯಲ್ಲಿ ಕಂಡುಬರುತ್ತದೆ. ಕೊನೆಯ ಅಂಕದಲ್ಲಿ ಇಡೀ ನಾಟಕದ ಕ್ರಿಯೆಯು ಸ್ಫೋಟಿಸುವುದನ್ನು ಗಮನಿಸಿದಾಗ ಅದು ತನ್ನ ನ್ಯಾಯವಾದ ಒತ್ತಡವನ್ನು ಕಳೆದು ಕೊಂಡಂತೆ ಆಯಿತು. ಈ ಪ್ರದರ್ಶನದ ಸೋಲಂತೂ ಚಕಿತಗೊಳಿಸುವಂಥದು. ನಾಟಕ ಪ್ರದರ್ಶನದ ಎಲ್ಲಾ ಸಿದ್ಧತೆಯನ್ನೂ ಮಾಡಿರುವಂತೆ ಕಂಡುಬರುವ ಈ ಪ್ರದರ್ಶನದಲ್ಲಿ ಕೂಡ ಪಾತ್ರಧಾರಿಗಳು ಅಭಿನಯದ ಸ್ಪರ್ಧೆಯಲ್ಲಿ ಭಾಗವಹಿಸಿದವ

ರಂತೆ ಕಂಡುಬಂದು–ಅಲ್ಕಾಜಿಯವರ ಈಗಿನ ಸ್ಥಿತಿಯಲ್ಲಿ 'ಗ್ರ್ಯಾಂಡ್ ಮಾಸ್ಟರ್ ಶೈಲಿ' ಯಲ್ಲಿ ಸಂಗೀತ ನಾಟಕಗಳಲ್ಲಿ ಸಾಮಾನ್ಯವಾಗಿದ್ದ 'ಅಭಿನಯ ಸ್ಪರ್ಧೆ'ಯು ಒಂದು ಪ್ರಬಲವಾದ ಕಾರಣವೋ ಲಕ್ಷಣವೋ ಆಗಿರುವುದನ್ನು ಗುರುತಿಸಬಹುದಾಗಿದೆ.

ಈ ಹಬ್ಬದ ಯಶಸ್ಸನ್ನು ಅಲ್ಕಾಜಿಯವರ ಹೆಸರಿಗೆ ಸೇರಿಸಿಯೂ ಅವರ ಶಿಷ್ಯ ವರ್ಗವು ಅವರಿಗೆ ಜೊತೆಯಾಗಿರುವುದರಲ್ಲಿ ನಮ್ಮ 'ರಾಷ್ಟ್ರೀಯ ರಂಗಭೂಮಿ'ಯ ಭವಿಷ್ಯವು ಮಂಕಾಗದೆ ಉಳಿಯುವಂತೆ ಕಂಡುಬರುತ್ತಿದೆ. ಇಲ್ಲಿ ನಾಟಕಗಳ ಆಯ್ಕೆ ಕೂಡ ತುಂಬ ಶ್ರೇಷ್ಠವೂ ಆಗಿದ್ದು ಅನುವಾದ ಮತ್ತು ರೂಪಾಂತರಗಳಿಗೆ ಭವಿಷ್ಯವಿದೆ ಯೆಂಬುದನ್ನು ಗಟ್ಟಿಯಾಗಿ ಹೇಳಿದಂತೆ ಆಗಿದೆ. ಇದಕ್ಕಾಗಿ ವಂದನೆಗಳು. ●

## ಚಿತ್ರಾ 42ರ ಭರತನಗರಿ

'ಚಿತ್ರಾ' ನಾಟಕ ತಂಡಕ್ಕೆ 42 ವರ್ಷವಾಗಿದೆಯಂತೆ. ನಿಜವೇ ? ಎಂದು ನನ್ನನ್ನೇ ಕೇಳಿಕೊಂಡೆ. ಇರಬಹುದು, ಸುಮಾರು ಇಪ್ಪತ್ತು ವರ್ಷಗಳಿಂದಲೂ ನೋಡುತ್ತ ಬಂದಿರುವೆ. 'ಚಿತ್ರ' ತನ್ನ ಸೋಲು ಗೆಲುವುಗಳ ನಡುವೆ ರಂಗಭೂಮಿಗೆ ಮಡಿಯುತ್ತ ಬಂದಿದೆ. ಇದರದ್ದೇ ಹೊಸಾದ ಭಾನುವಾರದ ನಾಟಕ ಶಾಲೆಯಾದ ಅಭಿನಯ ತರಂಗದವರು ಕ್ರಿಯಾಶೀಲ ನಟರು. ಪ್ರತಿವರ್ಷ ತರಬೇತಿ ಪಡೆದು ಹೋಗುವ ನಟರನ್ನು ನೋಡಿದ್ದೇನೆ. ಆದರೆ ಈ ಬಾರಿ ಎ. ಎಸ್. ಮೂರ್ತಿಯವರು ಬರಗೂರು ರಾಮಚಂದ್ರಪ್ಪನವರ 'ಭರತನಗರಿ' ಕಾದಂಬರಿಯನ್ನು ಆಧರಿಸಿದ ನಾಟಕ ವನ್ನು ಅಭಿನಯಕ್ಕೆ ಸಜ್ಜುಗೊಳಿಸಿದ್ದರು. ಹನುಮಂತನಗರದ ಗುಡ್ಡದ ಮೇಲೆ; ಅಂದರೆ ದೇವಸ್ಥಾನದ ಮುಂದಿನ ಬಯಲನ್ನು ಬಳಸಿಕೊಂಡಿದ್ದರು.

'ಭರತನಗರಿ'ಯನ್ನು ನಾಟಕ ರೂಪಕ್ಕೆ ಮತ್ತು ನಿರ್ದೇಶನಕ್ಕೆ ಬಿ. ಎಸ್. ಶಿವ ಕುಮಾರ್ ಆರಿಸಿಕೊಂಡದ್ದು ಸರಿ. ಆದರೆ ಸಮಕಾಲೀನ ರಾಜಕೀಯ ವಿಡಂಬನೆಯ ಮೇಲೆ ಒತ್ತು ಬೀಳುವಾಗ ಅದಕ್ಕೊಂದು ಕಥೆಯ ಚೌಕಟ್ಟು ಇಲ್ಲದಿದ್ದರೆ ಕಷ್ಟ. ಯಾಕೆಂದರೆ ಎರಡು ಗಂಟೆಯ ನಾಟಕದಲ್ಲಿ ವಿಡಂಬನೆಯೇ ತುಂಬಿಕೊಂಡಿದ್ದಾಗ ನಟರೊಡನೆ ಪ್ರೇಕ್ಷಕರು ಅನುಸರಿಸುವುದು ತುಂಬ ಕಷ್ಟ. ಅಭಿನಯ ತರಂಗದ ನಟರು ನಿಜವಾಗಿಯೂ ಪ್ರತಿಭಾವಂತರು. ಶಿವಕುಮಾರ್ ಶ್ರಮವಹಿಸಿದ್ದಾರೆ. ರಂಗದ ಸೂಕ್ಷ್ಮಗಳನ್ನು ಗುರ್ತಿಸಬಲ್ಲ ಹುಡುಗ. ಮುಂದಿನ ಪ್ರಯೋಗಗಳಲ್ಲಿ ಜೈಲಿನ ಕೊನೆಯ ದೃಶ್ಯಕ್ಕೆ ಕೈಕೊಟ್ಟರೆ ಒಂದಷ್ಟು ಹಿಂಸೆ ಕಡಿಮೆಯಾಗಿ ಪ್ರಯೋಗ ಮತ್ತಷ್ಟು ಲವಲವಿಕೆಯನ್ನು ಪಡೆಯಬಹುದು.

'ಅಭಿನಯ ತರಂಗ'ದಿಂದ ಹೊರಬಂದ ಉತ್ತಮ ನಟರನ್ನೆಲ್ಲ ಸೇರಿಸಿ ಒಂದು ರೆಪರ್ಟ್ರಿ ತಂಡವನ್ನು ರೂಪಿಸಿದರೆ 'ಚಿತ್ರ'ಗೆ ಮತ್ತಷ್ಟು ಜೀವ ಬರುತ್ತದೆ.

— ಶೂದ್ರ

# ನೀನು ಮುದಿಯಾದಾಗ

— ಡಬ್ಲ್ಯು. ಬಿ. ಏಟ್ಸ್

ನೀನು ಮುದಿ, ನರೆತಲೆ, ನಿದ್ರೆತೂಗುವ ಕಣ್ಣು
ಎವೆಮುಚ್ಚಿ ಬೆಂಕಿಯ ಬಳಿ ತೂರಾಡುವ ನೀನು
ತೆಗೆದುಕೋ ಪುಸ್ತಕ, ಓದು ನಿಧಾನವಾಗಿ
ಹಿಂದೊಮ್ಮೆ ಕುಣಿದಿತ್ತು ನಿನ್ನ ಕಣ್ಣಲಿ ಕನಸು
ಆ ಕನಸುಗಳ ಆಳ ನೆರಳು.

ನಿನ್ನ ಚೆಲುವ ಸವಿಕ್ಷಣಗಳ ಪ್ರೇಮಿಸಿದವರೆಷ್ಟು ಮಂದಿ?
ಆ ಪ್ರೇಮ ದಿಟವೋ ಸಟೆಯೋ?
ಪವಿತ್ರ ದಿವ್ಯಾತ್ಮ ಯಾತ್ರಿಕನ ಹಾಗಿರುವ ನಿನ್ನ ಬಹುಮುಖ ಶೋಕಗಳ
ಪ್ರೇಮಿಸಿದವ ಒಬ್ಬ ಮಾತ್ರ.

ಪ್ರಜ್ವಲಿಸುವ ಸರಳತ್ತ ಬಾಗಿ ನೋಡು
ಶೋಕದಿ ಪಿಸುಗುಟ್ಟಿದ ಪ್ರೇಮ ಪಲಾಯನ ಮಾಡಿತು ಹೇಗೆ?
ಪರ್ವತಗಳ ನೆತ್ತಿಯ ಮೇಲೆ ನಿನ್ನ ನಿಧಾನ ನಡಿಗೆ
ಕಿಕ್ಕಿರಿದ ನಕ್ಷತ್ರಗಳ ಮಧ್ಯೆ ನಿನ್ನ ಅವಿತಿಟ್ಟ ಮುಖ.

— ಅನು : ಕೆ. ಎನ್. ವಿಜಯಲಕ್ಷ್ಮಿ

ಕೆ.ಎನ್. ವಿಜಯಲಕ್ಷ್ಮಿ, C/o. ಕೆ.ರಂ. ನಾಗರಾಜ, ನಂ. 50, ಡಿ.ವಿ.ಜಿ. ರಸ್ತೆ, ಬೆಂಗಳೂರು-4



# ಕನಸಿಗೊಂದು ಕಣ್ಣು

## ಪಟ್ಟಮ್ಮಾಳ್

"ಇರುಳಿನಲಿ ತಾರೆಗಳು ಸುರಿದಾಗ, ಗಾಳಿ
ಹಾತೊರೆದಾಗ, ಹೊಲಗಳಲಿ ಬೀಸಿ ಬಂದು
ತೆನೆಗಳಲಿ ಮುಗಿಲು ಹಾಸರೆದಾಗ, ನಿನ್ನು
ತೆ, ಮೈಯಿರದ ನೆರಳಾಗಿ ಅಲೆವೆನೆಂದು"

— ಸು. ರಂ. ಎಕ್ಕುಂಡಿ

ಪಟ್ಟಮ್ಮಾಳ್ ಇರುಳಿನಲ್ಲಿ, ಹಗಲಿನಲ್ಲಿ ಹಾಡಿದವಳು. ಸುಬ್ಬಲಕ್ಷ್ಮಿಯಂತೆ, ವಸಂತಕುಮಾರಿಯಂತೆ ಅಲ್ಲ. ಚೆಂಬೈ ವೈದ್ಯನಾಥ ಭಾಗವತರಂತೆ ಅಥವಾ ಎನ್. ಡಿ. ರಾಮನಾಥ್‌ರವರ ರೀತಿಯಲ್ಲಿ ಗಡಸು ಧ್ವನಿಯಲ್ಲಿ ನಾದವನ್ನು ವಿಜೃಂಭಿಸಿದವಳು. ಹೀಗೆ ಬರೆಯುತ್ತ ಹೋದರೆ ಇವರ ಬಗ್ಗೆಯೇ ಬರೆದುಬಿಡಬಹುದು. ಆದರೆ ಇವರನ್ನು ನೆನಪಿಸಿದ ಪಟ್ಟಮ್ಮಾಳ್ ಸುಮಾರು ಅರವತ್ತೈದು ವರ್ಷದ ಮುದುಕಿ, ಒಂದು ಕಾಲಕ್ಕೆ ಕಪ್ಪು ಸುಂದರಿಯಾಗಿದ್ದಳೇನೋ. ಯಾಕೆಂದರೆ ಆ ಸೌಂದರ್ಯದ ಪಳೆಯುಳಿಕೆಗಳು ಈಗಲೂ ಈ ಮುದುಕಿಯ ಮುಖದ ತುಂಬ ಹರಡಿಕೊಂಡಿದೆ. ಎಂ.ಎಸ್. ಸುಬ್ಬುಲಕ್ಷ್ಮಿಯ ಬೆಳ್ಳಿಯ ಕೂದಲಂತೆ ಮಿಣಮಿಣ ಮಿಂಚುತ್ತದೆ. ಹಾಗೆಯೇ ಬಾಯಿತುಂಬ ನಗುತ್ತಾಳೆ. ಆದರೆ ಪಟ್ಟಮ್ಮಾಳ್ ರೀತಿಯಲ್ಲಿಯ ಧ್ವನಿ, ಹಾಡು ಕಲಿತಿದ್ದರೆ ಡಿ.ಕೆ. ಪಟ್ಟಮ್ಮಾಳ್ ರೀತಿಯಲ್ಲಿ ಹಾಡುತ್ತಿದ್ದಳೇನೋ. ಸಂಗೀತಕ್ಕೆ ಬೇಕಾದ ಶ್ರಮ, ಶ್ರದ್ಧೆ ಮತ್ತು ಕ್ರಿಯಾಶೀಲತೆ ಈ ಮುದುಕಿಯಲ್ಲಿ ತುಂಬಿಕೊಂಡಿರುವುದರಿಂದ 'ಹಾಡ್ತಾ ಹಾಡ್ತಾ ರಾಗ' ಎಂಬ ಮಾತು ಸತ್ಯದಂತೆ. ಡಿ.ಕೆ. ಪಟ್ಟಮ್ಮಾಳ್‌ರವರ ಸಂಗೀತವನ್ನು ಮೊದಲನೆಯ ಬಾರಿಗೆ ಕೇಳಿದ್ದು : 25 ವರ್ಷಗಳ ಹಿಂದೆ. ತಮಿಳು ನಾಡಿನ ಹೊಸೂರು ನಮ್ಮೂರಿಗೆ ಹದಿನೆಂಟು ಕಿಲೋಮೀಟರ್ ಇರಬಹುದು. ಸಂಜೆ ಏಳು ಘಂಟೆಗೆ ಊಟ ಮಾಡಿ ಸುಮಾರು ಹತ್ತು ಹನ್ನೆರಡು ಮಂದಿ ಹೊರಟಿದ್ದು, ಹೊಸೂರು ಕರಗದ ಸಮಯದಲ್ಲಿ ಎಂ. ಎಸ್. ಸುಬ್ಬುಲಕ್ಷ್ಮಿಯವರ ಸಂಗೀತವಿದೆಯೆಂದು. ಉತ್ಸಾಹದಲ್ಲಿ ಓಡುತ್ತ, ಓಟದ ನಡಿಗೆಯಲ್ಲಿ ಹೋದಾಗ ಸುಬ್ಬುಲಕ್ಷ್ಮಿ ಹಾಡುತ್ತಿರಲಿಲ್ಲ. ಪಟ್ಟಮ್ಮಾಳ್ ಹಾಡುತ್ತಿದ್ದರು. ಸಂಗೀತದ ನಂತರ 'ಅಪೂರ್ವ ಸಹೋದರುಲು' ತೆಲುಗು ಚಿತ್ರ ನೋಡಿದೆವು ಅನ್ನಿಸುತ್ತದೆ.

ಪಟ್ಟಮ್ಮಾಳ್ ನನ್ನ ಕಣ್ಣಿಗೆ ಪರಿಚಯವಾಗಿದ್ದು ನಾಲ್ಕೈದು ವರ್ಷಗಳ ಹಿಂದೆ. ದಿನಾ ಬೆಳಿಗ್ಗೆ ಜಾಗಿಂಗ್‌ಗೆ ಹೋದಾಗ ಮುದುಕಿಯೊಬ್ಬಳು ಬರುತ್ತಾಳೆ. ಆದರೆ ಆಕೆ ಬರುವುದು ಜಾಗಿಂಗ್‌ಗೆ ಅಲ್ಲ. ಸುತ್ತಲಿನ ಬಯಲನ್ನು ಹತ್ತು ಬಾರಿ ಸುತ್ತಿ ಸಣ್ಣಪುಟ್ಟ ಕಡ್ಡಿಗಳನ್ನು ಕಂಕುಳಲ್ಲಿ ಸಂಗ್ರಹಿಸಿಕೊಂಡು ಹೋಗುತ್ತಿದ್ದಳು. ಒಮ್ಮೆ ಪುಟ್ಟ ಮರದ ಕೊಂಬೆಯೊಂದು ಮುರಿದು ನೇತಾಡುತ್ತಿತ್ತು. ಅದನ್ನು ಕೆಳಕ್ಕೆಳೆಯಲು ಪ್ರಯತ್ನಿಸುತ್ತಿದ್ದಳು. ಅದನ್ನು ನೋಡುತ್ತಲೇ ಓಡುತ್ತಿದ್ದೆ. ಮುದುಕಿ ಅಲ್ಲಿಯೇ ನಾನಾ ರೀತಿಯಲ್ಲಿ ಬಸ್ಕಿ ಹೊಡೆಯುತ್ತಿದ್ದ ಒಂದಿಬ್ಬರನ್ನು ಕೇಳಿರಬೇಕು ಕೊಂಬೆಯನ್ನೆಳೆದುಕೊಡಲು. ಆದರೆ ಅವರು ದೇಹದ ಬೆವರು ಕುಗ್ಗಬಹುದೆಂದು ತಮ್ಮ ವ್ಯಾಯಾಮದಲ್ಲಿಯೇ ತಲ್ಲೀನರಾಗಿದ್ದರೆಂದು ಕಾಣುತ್ತದೆ. ಕೊಂಬೆ ನೇತಾಡುತ್ತಲೇ ಇತ್ತು. ಮುದುಕಿ ಕಣ್ಣಗಲಿಸಿ ಕೊಂಬೆಯನ್ನೇ ನೋಡುತ್ತಿದ್ದಳು. ಕೊನೆಗೆ ನನ್ನತ್ತ ನೋಡಿದಳು. ಕೇಳುವ ಧೈರ್ಯ ಇಲ್ಲ. ಎಲ್ಲಿ ನಾನೂ ಸಹ ಇಲ್ಲವೆನ್ನುವೆನೆಂಬ ಸಂಕೋಚದಿಂದ. ಆದರೆ ಆ ಮುದುಕಿ ಕೇಳಿದಾಕ್ಷಣ ಅದನ್ನು ಜೋರಾಗೆಳೆದೆ. ಅದು ಕೆಳಕ್ಕೆ ಬಿತ್ತು. ಅವಳು ಕೃತಜ್ಞತೆಯ ಭಾವದಿಂದ ತೆಗೆದುಕೊಂಡು ಹೋದಳು. ಇದಾದ ಮೇಲೆ ಆ ಬಯಲಿನಲ್ಲಿ ಸಿಕ್ಕಿದಾಗಲೆಲ್ಲ ಮುಖವರಳಿಸಿ ನಕ್ಕು ಮರೆಯಾಗುತ್ತಿದ್ದಳು. ಈ ಮಧ್ಯೆ ನನಗಿಂತ ಮುಂಚೆಯೇ ಹೋಗಿ ವ್ಯಾಯಾಮ ಮಾಡುತ್ತಿದ್ದವಳು ಪಂಜಾಬಿ ಡ್ರೆಸ್ಸಿನ ಮುದುಕಿಯೊಬ್ಬಳು. ಯಾರೊಡನೆಯೂ ಮಾತಾಡದೆ ಸುಮಾರು ಮುಕ್ಕಾಲು ಗಂಟೆಯಷ್ಟು ಬೆಳಗಿನ ತಂಪು ಹವೆಯಲ್ಲಿ ದೇಹವನ್ನು ದಂಡಿಸುತ್ತಿದ್ದಳು. ಒಮ್ಮೊಮ್ಮೆ ಆ ಮುದುಕಿಯ ಜೊತೆ ಸಾಕಷ್ಟು ಎತ್ತರದ ದುಂಡುಕಾಯದ ಹುಡುಗಿಯೊಬ್ಬಳು ಬರುತ್ತಿದ್ದಳು. ಅವಳು ಬಂದಾಗ ಬಯಲಿನ ಹುಡುಗರಿಗೆ ಎಲ್ಲಿಲ್ಲದ ಹುರುಪು. ಅವಳೂ ಅಷ್ಟೇ ಲವಲವಿಕೆಯಿಂದ ಮಾಟವಾಗಿ ಕಣ್ಣಿನಲ್ಲಿ ಹೊಳಪನ್ನು ಚೆಲ್ಲಿ ಮಾಯವಾಗುತ್ತಿದ್ದಳು. ಅವಳು ಬರದ ದಿನ ಬಹಳಷ್ಟು ಹುಡುಗರಿಗೆ ಆ ಬಯಲು ಬರಡು ಅನ್ನಿಸಬೇಕು.

ಒಂದು ದಿನ ಅವಳ ಹೆಸರು ಕೇಳಬೇಕೆನ್ನಿಸಿತು, ಕೇಳಿದೆ. ಕನಕಲಕ್ಷ್ಮಿ; ಮನೆ ಮಾತು ತಮಿಳು ಎಂದಳು. ಮುದುಕಿ ನಮ್ಮ ಮನೆಯ ಪಕ್ಕದ ಪಂಜಾಬಿ ಹೆಂಗಸು. ನಾನು ಪಿ.ಯು.ಸಿ. ಓದುತ್ತಿರುವೆ. ವೈ.ಎಂ.ಸಿ.ಎ.ಗೆ ಆಟವಾಡಲು ಹೋಗುವೆ– ಎಂದಳು. ಮಾರನೆಯ ದಿನ ಹುಡುಗನೊಬ್ಬ ಪರಿಚಯ ಮಾಡಿಕೊಂಡ. ನಾನು ನಿಮ್ಮ ವಿದ್ಯಾರ್ಥಿಯಾಗಿದ್ದೆ. ಈಗ ಇಂಜಿನಿಯರಿಂಗ್‌ನಲ್ಲಿ ಕೊನೆಯ ವರ್ಷ ಓದುತ್ತಿದ್ದೇನೆ ಎಂದ. ಕನಕಲಕ್ಷ್ಮಿಯನ್ನು ಗಂಟ್ಟಾಗಿ ಪ್ರೀತಿಸುತ್ತಿದ್ದ ಹುಡುಗ. ಅವಳ ಪಕ್ಕದ ಮನೆಯ ಹುಡುಗ. ನಕ್ಕು ಸುಮ್ಮನಾದೆ. ಈಗ ಆರು ತಿಂಗಳಿಂದ ಪಂಜಾಬಿ ಹೆಂಗಸಾಗಲಿ, ಕನಕಲಕ್ಷ್ಮಿಯಾಗಲಿ, ಆ ಹುಡುಗನಾಗಲಿ ಕಣ್ಣಿಗೆ ಬೀಳಲಿಲ್ಲ. ಪಂಜಾಬಿ ಹೆಂಗಸು ಸೋತ ಜೀವಿಯಾಗಿದ್ದಳು, ಯಾಕೆಂದರೆ ಆಕೆಯ ನಡಿಗೆ ಸೋತಿತ್ತು.

ಒಂದು ವರ್ಷದಿಂದ ಕಾಣದ ಪಟ್ಟಮ್ಮಾಳ್ ಕಾಣಿಸಿಕೊಂಡಳು. ಎಲ್ಲಿಗೆ ಹೋಗಿದ್ದೆ ಎಂದು ಕೇಳಿದೆ. ಕೊಯಮತ್ತೂರಿಗೆ ಹೋಗಿದ್ದೆ ಎಂದಳು. ಅದು ಅವಳೂರು. ಕುಟುಂಬದ ಬಗ್ಗೆ ಕೇಳಿದಾಗ: ನನ್ನ ಗಂಡ ಪೋಲೀಸ್ ಡಿಪಾರ್ಟ್‌ಮೆಂಟ್‌ನಲ್ಲಿದ್ದ. ಸತ್ತು ಹತ್ತು ವರ್ಷವಾಯಿತು. ನನಗೆ ಐನೂರು ರೂಪಾಯಿ ಪೆನ್‌ಷನ್ ಬರುತ್ತೆ. ಒಬ್ಬನೇ ಮಗ ಇದ್ದಾನೆ. ಅವನೊಡನೆ ಇದ್ದೇನೆ; ಎರಡು ಎಮ್ಮೆಗಳಿವೆ. ದಿನಾ ಇಂಥ ಬಯಲಿನಲ್ಲಿ ಮೇಯಿಸುತ್ತೇನೆ ಎಂದಳು. ಸ್ವಲ್ಪ ಸ್ವಾತಂತ್ರ್ಯ ವಹಿಸಿ ನಿನ್ನ ಗಂಡ ಚೆನ್ನಾಗಿ ನೋಡಿಕೊಳ್ಳುತ್ತಿದ್ದನಾ ? ಎಂಬ ಪ್ರಶ್ನೆಗೆ ಪಾಪ ! ಸತ್ತವನ ಬಗೆಗೆ ಯಾಕೆ ಏನೇನೋ ಹೇಳಬೇಕು ಎಂದು ವಿಷಾದದಿಂದ ನುಡಿದಳು. ಹಾಗೆಯೇ ಮುಂದೆ ನಡೆದಳು. ಅವಳಿಗೆ ಎದಿರಾಗಿ ಗಂಡು ಹೆಣ್ಣು ಇಬ್ಬರೂ ಎರಡು ನಾಯಿಗಳನ್ನು ಸರಪಳಿಗಳಿಂದ ಹಿಡಿದು ಬರುತ್ತಿದ್ದರು. ಅವರು ಹುಚ್ಚಾಸ್ಪತ್ರೆಯ ಅಥವಾ ಕ್ಯಾನ್ಸರ್ ಆಸ್ಪತ್ರೆಯ ವೈದ್ಯರಿರಬಹುದು. ಮುದುಕಿ ಪಟ್ಟಮ್ಮಾಳನ್ನು ನೋಡಿ 'ವ್ಹಾಹ್' ಎಂದುವು. ಆದರೆ ಅವಳು ಇಂಥ ನಾಯಿಗಳ ನಡುವೆ ಬಹುದೂರ ಬದುಕಿ ಬಂದಿರುವುದರಿಂದ ಕಿಂಚಿತ್ತೂ ಭೀತಳಾಗದೆ ಮತ್ತಷ್ಟು ಒಣಗಿದ ಕಡ್ಡಿಗಳನ್ನು ಸಂಗ್ರಹಿಸಿದಳು. ಅಲ್ಲಿಯೇ ಸಮೀಪದಲ್ಲಿದ್ದ ಗುಡಿಸಲುಗಳತ್ತ ಮರೆಯಾದಳು.

ಸೂರ್ಯ ಕೆಂಪಾಗಿ ಮನಮೋಹಕವಾಗಿ ಉದಯಿಸುತ್ತಿದ್ದ. ತಮ್ಮ ಅನ್ನಕ್ಕಾಗಿ ಹೊರಟ ಹಕ್ಕಿಗಳು ಚಿಲಿಪಿಲಿಗುಟ್ಟುತ್ತ ಮೇಲೆ ಮೇಲೆ ಹಾರುತ್ತಿದ್ದುವು. ●

30-3-1992 — ಶೂದ್ರ ಶ್ರೀನಿವಾಸ್




## ಹೊಸ ತಲೆಮಾರಿನ ವಿಭಿನ್ನ ಅನುಭವ – ಕುಮಾರ ಜೋಶಿ, ಅಬ್ದುಲ್ ರಶೀದ್ ಮತ್ತು ಸ. ರಘುನಾಥರ ಕವಿತೆಗಳು

ಈ ಹೊತ್ತಿನ ಕನ್ನಡ ಯುವ ಕಾವ್ಯ ಎಲ್ಲೋ "Dark Age" ಥರದ ಕೋಶಾವಸ್ಥೆಯಲ್ಲಿ ಮುದುಡಿಕೊಂಡು ಸ್ಥಗಿತಗೊಳ್ಳುತ್ತಲೇ ಅಲ್ಲಿಂದ ಬೆಳಕಿನೆಡೆಗೆ ಹೊರಜಿಗಿವ ವಿಫುಲ ಯತ್ನಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದೆಯೆಂಬ ಕುತೂಹಲ

ಎಲ್.ಎನ್. ಮುಕುಂದರಾಜ್, ನಂ. 5, 1ನೇ ತಿರುವು, ನಾಗಪ್ಪ ಬೀದಿ, ಅರಮನೆ ಗುಟ್ಟಹಳ್ಳಿ,
ಬೆಂಗಳೂರು-560 003 ದೂರವಾಣಿ : 369716

ನನ್ನಲ್ಲಿದೆ. ಈಗಾಗಲೇ ಬೆನ್ನಿಗಿರುವ ದೈತ್ಯಮಾದರಿಗಳಿಂದಾಚೆ ತನ್ನದೇ ವಿಶಿಷ್ಟ ಆಕೃತಿಯೊಂದರ ಹುಡುಕಾಟದಲ್ಲಿ ಕಾಲೆಳೆಯುತ್ತಿದೆಯೆಂಬ ಅನುಮಾನ ಧಿಗ್ಗನೇಳುತ್ತದೆ; ಅಥವಾ ಕಳೆದ ದಶಕದ ಕಾವ್ಯ ಚಳವಳಿಗಳು, ಕಾವ್ಯ ಕುರಿತಾದ ಸ್ವಯಂಕಲ್ಪಿತ ವ್ಯಾಖ್ಯಾನಗಳು, ಹುಸಿಚಿಂತನೆಗಳು ತರುಣ ಕವಿಗಳ ದಿಕ್ಕುಗೆಡಿಸಿರುವ ಪ್ರಯತ್ನ ಇದಕ್ಕೆ ಕಾರಣವಾಗಿರಬಹುದು; ಅಥವಾ ಸುತ್ತಲಿನ ಸಾಮಾಜಿಕ ಲೋಭ, ರಾಜಕೀಯ, ಆರ್ಥಿಕ ಹಿಂಸೆ, ಸಾಂಸ್ಕೃತಿಕ ಮತ್ಸರಗಳು ವೈಯಕ್ತಿಕ ಮತ್ತು ಸಾಮುದಾಯಿಕ ನೆಲೆಯಲ್ಲಿ ಕವಿಯೊಬ್ಬನ ವ್ಯಕ್ತಿತ್ವ ನಿರ್ಮಿತಿಯಲ್ಲಿ ಅಸಾಧಾರಣ ಪ್ರಭಾವ ಬೀರುತ್ತಲೇ ಅವನ ಕಾವ್ಯ ಪ್ರತಿಭೆಯ ಜಾಳುತನಕ್ಕೆ ಬೀಜವಾಗುತ್ತಿರುವ ದುರಂತವೂ ಇರಬಹುದು.

ಒಟ್ಟಾರೆ ನನ್ನೊಳಗಿನ ಈ ಅನುಮಾನಗಳಿಗೆ ಸಾತ್ವಿಕ ಉತ್ತರಗಳ ಅನ್ವೇಷಣೆಯಲ್ಲಿರುವ ನಾನು ಈ ಮಾತುಗಳಿಗೆ ಸ್ವಲ್ಪಮಟ್ಟಿಗೆ ಅಪವಾದವೆಂಬಂತೆ ತೋರುವ ಕುಮಾರ ಜೋಶಿ, ಅಬ್ದುಲ್ ರಶೀದ್, ಸ. ರಘುನಾಥರ ಅನುಕ್ರಮವಾಗಿ ಕವಿ ಮತ್ತು ಕರವಸ್ತ್ರ, ನನ್ನ ಪಾಡಿಗೆ ನಾನು, ದಾರಿ ಮತ್ತು ಆಕಾಶ ಕವನ ಸಂಕಲನಗಳ ಓದಿಗೆ ತೊಡಗಿಕೊಂಡಿದ್ದೇನೆ.

ಕವಿ ಮತ್ತು ಕರವಸ್ತ್ರ ಸಂಕಲನದಲ್ಲಿ ಕುಮಾರ ಜೋಶಿ ಬೊಂಬಾಯಿಯ ಮಧ್ಯಮ ವರ್ಗದ ಜನರ ಯಾಂತ್ರೀಕೃತ ಬದುಕಿನ ಅನುಭವದ ವಿವರಗಳನ್ನು ಕಲಾತ್ಮಕವಾಗಿ, ಬಿಗಿಲಯದಲ್ಲಿ ದಾಖಲಿಸುತ್ತಾರೆ. ಬೊಂಬಾಯಿಯಂಥ ಯಾವುದೇ ಭಾರತೀಯ ಪಟ್ಟಣವೂ ಮನುಷ್ಯನ ಬದುಕನ್ನು ಎಷ್ಟರ ಮಟ್ಟಿಗೆ ಸಂಕೀರ್ಣಗೊಳಿಸುತ್ತದೆಂಬ ಉದಾಹರಣೆಗಳನ್ನು ಇಲ್ಲಿ ಕಾಣಬಹುದು. ಯಾಂತ್ರಿಕ ಬದುಕಿನ ನಾಗರೀಕ ಭಾಷೆಯೊಂದರ ನಿರ್ಮಿತಿಯಲ್ಲಿ ವಿಶೇಷ ಪರಿಣತಿ ತೋರುವ ಜೋಶಿ ತಮ್ಮ ಸುತ್ತಲಿನ ಸಾಂಸ್ಕೃತಿಕ ವಲಯದ ಇನ್ನಿತರ ಮುಖ್ಯ ಬರಹಗಾರರ ದಟ್ಟ ಪ್ರಭಾವಗಳಿಗೂ ಒಳಗಾಗದಿಲ್ಲ. ಗುಮ್ಮ, ಬಾ, ಬರುವೆಯಾ? ಇಲ್ಲದ ಸೇತುವೆ ಕುರಿತು, ಒಡೇರಲ್ಲಿ ಒಂದು ಮಾತು, ಸಂಬಂಧ ಇತ್ಯಾದಿ ಕವಿತೆಗಳು ಇವರ ಉತ್ತಮ ರಚನೆಗಳಾಗಿವೆ.

ಈ ಸಂಕಲನದ ಮತ್ತೊಂದು ಮುಖ್ಯ ಆಶಯ ಕವಿತೆಗಳನ್ನು ಕುರಿತ ಚಿಂತನೆಗಳು. ಒಂದರ್ಥದಲ್ಲಿ ಬದುಕಿನ ಮುಖ್ಯ ಗ್ರಹಿಕೆಗಳನ್ನು ಕವಿತೆಯ ಮೂಲಕ ಅರಿಯುವ ಪ್ರಕ್ರಿಯೆ ಎಂದೂ ಗುರುತಿಸಬಹುದು. ಇದೇ ರೀತಿಯ ಕವಿ ಮತ್ತು ಕಾವ್ಯ ಸಂಬಂಧಗಳ ಹಿನ್ನೆಲೆಯುಳ್ಳ ರಚನೆಗಳನ್ನು ರಶೀದ್, ರಘುನಾಥರಲ್ಲೂ ಕಾಣಬಹುದು (ಈ ಬಗ್ಗೆ ಮುಂದೆ ವಿವರವಾದ ಚರ್ಚೆ ಇದೆ).

ಪ್ರಕೃತಿಯನ್ನು ದೋಚುವ ಮುಖ್ಯ ದರೋಡೆಕೋರ ಮನುಷ್ಯ. ಅವನ ನಿರ್ಲಜ್ಜತೆಯ ಸಲೀಸು ಟೀಕೆ 'ಬಂಧುಗಳೆ' ಕವಿತೆಯಲ್ಲಿದೆ, "ಮಂತ್ರಿಗಳ ಮಗಳ ಸಂಪಿಗೆ ಮೂಗು ತುಂಬ ಗೊಣ್ಣೆಗಟ್ಟಿದ ಸುಂಬಳ" ಎನ್ನುವ ಸಣ್ಣ ಪದ್ಯ

ಪ್ರತಿಮೆಯ ಮೂಲಕ ಇಡೀ ಇಂಡಿಯಾದ ದಾರುಣ ಅಸಹ್ಯತೆಯನ್ನು ಮನಸ್ಸಿಗೆ ನಾಟಿಸಿಬಿಡುವಂಥ ಪುಟ್ಟ ಪುಟ್ಟ ಕವಿತೆಗಳು ಸಂಕಲನದ ತುಂಬಾ ಹರಡಿಕೊಂಡು ಕವಿ ಪ್ರತಿಭೆಯ ಮಿಂಚುಗಳಾಗಿವೆ. ಪ್ರೌಢ ಬದುಕಿನ ಗುಂಟ ಎಲ್ಲ ನಿಗೂಢ ವ್ಯಾಪಾರಗಳ ಬಣ್ಣನೆ 'ಇಲ್ಲದ ಸೇತುವೆಯ ಕುರಿತು' ಮುಂತಾದ ಕವಿತೆಗಳಲ್ಲಿ ಕಾಣಬಹುದು.

ಮುಸ್ಲಿಂ ಲೋಕದ ಬೆರಗುಗಳಿಗೆ ತಮ್ಮ ಕತೆಗಳ ಮೂಲಕ ಸಮರ್ಥ ಅಭಿವ್ಯಕ್ತಿ ದಕ್ಕಿಸಿಕೊಟ್ಟ ನಮ್ಮ ನಡುವಿನ ಅತ್ಯಂತ ಪ್ರತಿಭಾವಂತ ಲೇಖಕ ಅಬ್ದುಲ್ ರಶೀದ್ ತನ್ನ ಮೊದಲ ಸಂಕಲನ "ನನ್ನ ಪಾಡಿಗೆ ನಾನು" ಮೂಲಕ ವಿಚಿತ್ರ ಆಶಯಗಳ ಓದಿಗೆ ಒಳಗಾಗುವಂತೆ ಮಾಡುತ್ತಾರೆ. ಈ ಸಂಕಲನದ ಹತ್ತೊಂಬತ್ತು ಕವಿತೆಗಳೂ ತಮ್ಮದೇ ಆದ ಕಾರಣಕ್ಕೆ ಆಕರ್ಷಕವಾಗಿವೆ. ಪ್ರಾಯದಲ್ಲಿ ಬರೆಯ ಹೊರಟವನೊಬ್ಬನ ಮಹತ್ವಾಕಾಂಕ್ಷೆಯ ಸೂಚನೆಗಳ ಕೈಗಂಬಗಳಂತೆ ತೋರುತ್ತವೆ. ತಾಯಿ, ಗೆಳತಿ, ಸೋದರ ಮುಂತಾದ ಮನುಷ್ಯ ಸಂಬಂಧಗಳೊಳಗಿನ ಆಳದ ಸಂವೇದನೆಗಳ ಸೂಕ್ಷ್ಮಲಯ ಕವಿತೆಯಿಂದ ಕವಿತೆಗೆ ಹರಿಯುತ್ತದೆ. ಮುನ್ನುಡಿ ಬರೆಯುತ್ತಾ ಕಿ. ರಂ. ಬಹುಶಃ ಈ ಕಾರಣಕ್ಕೆ ಇದನ್ನೊಂದು ಕವನಗುಚ್ಛವೆಂದು ಕರೆದು ಇಡೀ ಸಂಕಲನದ ಏಕದೇಹಿತ್ವವನ್ನು ಗುರುತಿಸುತ್ತಾರೆ.

ತನ್ನೊಳಗಿನದೇನನ್ನೋ ಇನ್ನೊಬ್ಬರೆದುರು ತೆರೆದು ನಿವೇದಿಸುವ ಮೂಲಕ ಹಗುರವಾಗಬೇಕೆಂಬ ವಿಚಿತ್ರ ಹಂಬಲ (ಅನಿವಾರ್ಯವಾದದ್ದು) ಮೊದಲ ಕವಿತೆಯಲ್ಲಿಯೇ ಪ್ರಾರಂಭವಾಗುತ್ತದೆ. ಇಡೀ ಸಂಕಲನದಲ್ಲಿ ಎದ್ದು ಕಾಣುವ ಅಳು, ನಗು, ಹೆಣ್ಣು, ಮಗು ಈ ಇಂಥ ಪ್ರತಿಮೆಗಳ ನಿಗೂಢ ಲೋಕಕ್ಕೆ ಕೌತುಕಾರ್ಥಗಳ ವಿವರಣೆ ಅಗತ್ಯವೆಂಬ ಭಾವನೆ ಮೂಡುತ್ತದೆ. 'ಒಂದು ಹಳೆಯ ಪತ್ರ' ಕವಿತೆಯಲ್ಲಿ ರಶೀದ್ ಪ್ರೀತಿಗೆ ವಿಚಿತ್ರ ವೈಭೋಗಗಳನ್ನು ತಂದುಕೊಡುವ ಕ್ರಮ ಮೆಚ್ಚುಗೆಯದು. ಮಧ್ಯಯುಗದ ಅನುಭಾವಿ ಕಬೀರರ ನೆನಪಿನ ಹತ್ತಿರ ಒಯ್ಯುವ ಕವಿತೆ 'ಹಜ್ ಹಬ್ಬದ ನೆನಪು' ಬೆರಗಿನ ಪ್ರಪಂಚದ ಉತ್ತಮ ಚಿತ್ರಣವಾಗಿದೆ.

ಅಡಿಗರ 'ಭೂತ' ಕವಿತೆಯನ್ನು ಕಾವ್ಯಮೀಮಾಂಸೆಯ ಮಾದರಿ ಎಂದ ಚಂದ್ರಶೇಖರ ನಂಗಲಿಯವರ ವಿವೇಚನೆಯ ಹಿನ್ನೆಲೆಯಲ್ಲಿ ಪ್ರಾಚೀನ ಕವಿಗಳಿಂದ ಶುರುಗೊಂಡು ಇಲ್ಲಿಯವರೆಗಿನ ಪ್ರತಿಯೊಬ್ಬ ಕವಿಯೂ ಕಾವ್ಯ ನಿರ್ಮಿತಿಯ ಬಗ್ಗೆ ತನ್ನದೇ ಆದ ಆಲೋಚನೆಗಳನ್ನು ಮಂಡಿಸುತ್ತಲೇ ಇದ್ದಾನೆ. ರಶೀದ್, ಜೋಶಿ, ರಘುನಾಥರೂ ಇದಕ್ಕೆ ಹೊರತಲ್ಲ. ಕಾವ್ಯಸೃಷ್ಟಿಯ ಇಕ್ಕಟ್ಟನ್ನು "ಕವಿತೆ ಬರೆಯಲಿ ಹೇಗೆ ಸಖಿ ಇರದೆ ಎದುರಲ್ಲಿ ; ಹೇಗೆ ಬರೆಯಲಿ ಕವಿತೆ ಕುಳಿತು ಸಖಿ ಎದುರಲ್ಲಿ ?" ಎಂಬ ಪ್ರಶ್ನೆಯೊಂದಿಗೆ ರಘುನಾಥರ ಕಾವ್ಯಚಿಂತನೆ ಎದ್ದುನಿಲ್ಲುತ್ತದೆ. "ಕವಿ ಕರವಸ್ತ್ರ ಕೊಳ್ಳಲಾರದ ಕಣ್ಣೀರ ಬಚ್ಚಿಟ್ಟು ಮತ್ತೆ ಕವಿತೆ ಬರೆಯುವ, ದುಃಖ ಮರೆಯುವ"

ಎಂದು ಕಾವ್ಯಸೃಷ್ಟಿಗೆ ಕಾರಣ ಹುಡುಕುವ ಜೋಶಿ; ಅಂತೆಯೇ "ಕವಿತೆ ಕೋಟೆ ಬಟ್ಟದ ಹಾಗೆ, ನನ್ನ ಹುಡುಗಿಯು ರಾತ್ರಿ ಕನಸಿನ ಹಾಗೆ" ಎನ್ನುವ ರಶೀದ್ "ಕವಿತೆ ಎರೆಹುಳುವಿನ ಹಾಗೆ, ಸುಂಡಿಲಿಯು ಹಾಗೆ. ಕೆರೆಯಂಗಳದ ಗೋಡಿನ ಹಾಗೆ, ಗೋಡಿ ನೊಳಗಣ ಗೋಟಿ ಗಡ್ಡೆಯು ಹಾಗೆ"–ಎಂಬ ಮುನಿಕೃಷ್ಣಪ್ಪನವರ ಸಾಲುಗಳನ್ನು ನೆನಪಿಸುತ್ತಾ ಹೋಗುತ್ತಾರೆ.

ಹಸಿ ಹಸಿ ಮನಸ್ಸುಳ್ಳ ಮುಗ್ಧ ಹುಡುಗತದದ ಛಾಪಿನ ರಶೀದರ ಈ ಸಂಕಲನ ನಮ್ಮನ್ನು ಕೌತುಕದ ಓದಿಗೆ, ಬರವಣಿಗೆಗೆ ಆಹ್ವಾನಿಸುತ್ತಲೇ ದೃಢ–ವಿಶ್ವಾಸಾರ್ಹ ಕಾವ್ಯಕ್ಕೆ ಉತ್ತಮ ರುಜುವಾತಾಗುತ್ತದೆ.

1991ರ ಮುಂದ್ದಣ ಕಾವ್ಯ ಪ್ರಶಸ್ತಿ ಪುರಸ್ಕೃತ ಕವಿ ಸ. ರಘುನಾಥ್ ಸರಳ ಪ್ರತಿಮೆಗಳ ಮೂಲಕ ಸಂಕೀರ್ಣ ಅನುಭವ ಲೋಕಕ್ಕೆ ತಮ್ಮ 'ದಾರಿ ಮತ್ತು ಆಕಾಶ' ಸಂಕಲನದಲ್ಲಿ ಸಹೃದಯರನ್ನು ವಿಹರಿಸುತ್ತಾರೆ. ವಿಶ್ವರೂಪದಂಥ ಕವಿತೆಗೆ ವಿಶಿಷ್ಟ ಕಥನಕ್ರಮ ನೀಡುತ್ತಲೆ ಎರಡು ವರ್ಷಗಳ ಗತಿಶೀಲ ಮುಖಾಮುಖಿಯ ವಿದ್ರಾವಕ ಅಂತರಗಳನ್ನು ಸರಳವಾಗಿ ಬಿಚ್ಚಿಡುತ್ತಾರೆ. ಇದೇ ಮಾದರಿಯ ಪುನರುತ್ಥಾನದಲ್ಲಿ ತನ್ನೊಳತೋಟಿಗಳ ತಿರಸ್ಕಾರ ಹುಟ್ಟಿದ ವ್ಯಕ್ತಿ ಸಾವನ್ನು ಆಶ್ರಯಿಸಿದರೂ, ಅವನನ್ನು ಮತ್ತೆ ನೆಲೆ ನಿಲ್ಲಿಸುವ ನಮ್ಮ ಸಾಂಸ್ಕೃತಿಕ ಸ್ಥಗಿತ ಮನೋಭಾವದ ಪ್ರತಿಫಲನವಾಗಿದೆ. ರಘುನಾಥ್ ಪ್ರಯತ್ನಿಸಿದ್ದರೆ ಇದೊಂದು ಅಚ್ಚುಕಟ್ಟಾದ ಕಥನ ಕವನವಾಗುತ್ತಿತ್ತು.

"ಎಲ್ಲರೂ ಪಾಠ ಕಲಿಯುವ ಕವಿತೆ ಓದುವ ದಿನ ಬರುತ್ತೆ, ಅಂತಲೇ ಆ ದಿನಕ್ಕಾಗಿ ಪಾಠ ಹೇಳುತ್ತಿದ್ದೇನೆ, ಕವಿತೆ ಬರೆಯುತ್ತಿದ್ದೇನೆ" ಎನ್ನುತ್ತಲೇ ಬದುಕಿನೊಳಗಿನ ಆತ್ಮವಿಶ್ವಾಸದ ಮೌಲ್ಯಗಳನ್ನು ಎತ್ತಿಹಿಡಿಯುವ ಕ್ರಮ ವಿಶೇಷವಾದದ್ದು. ಕುಮಾರ ಜೋಶಿಯ ಸಂಬಂಧ ಕವಿತೆಯು ಮಾದರಿಯಲ್ಲಿರುವ 'ಸೋನೆ' ಉತ್ತಮ ರಚನೆ. ಬದುಕಿನ ವಿವಿಧ ನೆಲೆಗಳನ್ನು ಕವಿ ಕಾವ್ಯ, ಸಖಿ ಮತ್ತು ಕುಡಿತಗಳಲ್ಲಿ ಅರಸುತ್ತಾರೆ. ಸಿದ್ಧರಾಮನ ಸ್ವಗತ ಅನೇಕ ಕಾರಣಗಳಿಂದಾಗಿ ಇನ್ನೊಂದು ಶ್ರೇಷ್ಠ ಕವಿತೆ. ವೆಂಕಟೇಶಮೂರ್ತಿ ಗುರುತಿಸಿರುವ "ಎದೆಯಲ್ಲಿ ರುಬ್ಬುತಿದೆ ಇಷ್ಟಲಿಂಗ" ದಂತಹ ಸಾಲುಗಳು ಒಳಾರ್ಥದ ಜಾಡು ಹಿಡಿವ ಅಗತ್ಯವನ್ನು ಒತ್ತಿಹೇಳುತ್ತವೆ. 'ಬರಲಾರೆ ಅನ್ನದಿರು' ಕವಿತೆಯು ಗೇಯ ಗುಣ ರಘುನಾಥ್ ಭಾವಗೀತೆ ರಚಿಸುವ ಅರ್ಹತೆಯುಳ್ಳವರೆಂಬ ಹೆಗ್ಗಳಿಕೆಯನ್ನು ಹೇಳುತ್ತದೆ. 'ಬರದ ಮಳೆ' ಫಲಪ್ರಾಪ್ತಿಯ ತೊಡಕನ್ನು ಕುರಿತು ಹೇಳುತ್ತಲೆ ಜೀವ ಸಂಕುಲದ ಸಮೃದ್ಧತೆಯನ್ನು ಹಲವಾರು ನಾಣ್ನುಡಿಗಳಲ್ಲಿ ಬಿಚ್ಚಿಡುತ್ತದೆ. 'ಕಾಗೆ ರೆಕ್ಕೆ ಬಿಚ್ಚಿದಾಗ ಎಲ್ಲ ಹಕ್ಕಿಗಳಂತೆ ಅದೂ ಅದ್ಭುತ' ಎಂಬ ಚೋದ್ಯ ತನ್ನ ಬಗ್ಗೆ, ತನ್ನ ಸುತ್ತಲಿನ ಬಗ್ಗೆ ಯೋಚಿಸಬೇಕೆಂಬ ಒತ್ತಾಯಕ್ಕೆ ಕವಿ ಓದುಗನನ್ನು ತಳ್ಳುತ್ತಾನೆ.

ಜೋಶಿ ಮತ್ತು ರಘುನಾಥರು ಮಧ್ಯಮ ವರ್ಗದ ನೇರಧ್ವನಿಗಳು. ಈ ವರ್ಗದ ದಟ್ಟ ಜೀವನಾನುಭವಕ್ಕೆ ಬಾಯಾಗುತ್ತಾರೆ. ರಶೀದ್ ಇದಕ್ಕಿಂತ ಭಿನ್ನವಾಗಿ ತನ್ನ ಸುತ್ತಲಿನ ಆಪ್ತ ಸಮುದಾಯಕ್ಕೆ ಎದೆಯಾಗುತ್ತಾರೆ. ಇಂಥ ಪ್ರತಿಕ್ರಿಯೆಗೆ ಅವರ ಭಿನ್ನ ಸಂಸ್ಕೃತಿಯ ಪರಿಸರ–ಪರಿಕರಗಳೂ ಕಾರಣವಿರಬಹುದು.

ಈ ಮೂರೂ ಜನ ಕವಿಗಳ ಗ್ರಹಿಕೆಯನ್ನು ಒಟ್ಟಾಗಿಯೂ, ಭಿನ್ನವಾಗಿಯೂ, ಎರಡೂ ತರಹದ ಸೂಕ್ಷ್ಮ ವಿವೇಚನೆಗಳ ಹಿನ್ನೆಲೆಯಲ್ಲೂ ನೋಡಬಹುದು, ಯಾಕೆಂದರೆ ಬಿಡಿ ಬಿಡಿಯಾಗಿ ಇವರು ಕನ್ನಡ ಯುವ ಕಾವ್ಯ ಸಂದರ್ಭದಲ್ಲಿ ಎಷ್ಟು ಮಹತ್ವಪೂರ್ಣರೋ, ತುಲನಾತ್ಮಕ ಚಿಂತನೆಗೂ ಅಷ್ಟೇ ಗ್ರಾಸ ಒದಗಿಸಬಲ್ಲ ಅರ್ಹತೆಯುಳ್ಳವರು. ಶಿವಪ್ರಕಾಶರನ್ನು ಹೊರತುಪಡಿಸಿ ಅಡಿಗ, ಶರ್ಮ, ಲಂಕೇಶ್, ಅನಂತಮೂರ್ತಿ, ಕಂಬಾರ, ಚಂಪಾ, ರಾಮಾನುಜನ್, ಸಿದ್ಧಲಿಂಗಯ್ಯ, ವೆಂಕಟೇಶಮೂರ್ತಿ ಇತ್ಯಾದಿ ಕವಿಗಳ ತರುವಾಯದ ಕಾವ್ಯಸೃಷ್ಟಿಯ ವಿಭಿನ್ನ ಆಶಯ ಪಡೆಕೊಂಡು, ತಮ್ಮದೇ ರೀತಿ, ಶೈಲಿಯ ಉತ್ತಮ ನೆಲೆಯನ್ನು ಆತುಗೊಳ್ಳುವಲ್ಲಿ ತಮ್ಮ ಪಾಡಿಗೆ ತಾವು ಸಮರ್ಥವಾಗಿ ತೊಡಗಿಸಿಕೊಂಡವರ ಪೈಕಿ ಒಬ್ಬರಾಗುವ ಅಪರೂಪ ತುಡಿತದ, ಅಪೂರ್ವ ಪ್ರತಿಭೆಯ ಕವಿಗಳಿವರು. ಕೊನೆಯಲ್ಲಿ ಕುಮಾರ ಜೋಶಿಯ ಈ ಕವಿತೆಯ ನೆನಪಿನೊಂದಿಗೆ ಈ ಟಿಪ್ಪಣಿ ಮುಗಿಸುತ್ತೇನೆ,

ಈ ಗಳಿಗೆ ಹೀಗೆ ಬರೆದರೆ ಇದೇ ಖರೆ

ಕೊರೆವ ಚಳಿಯಲ್ಲಿ ಅರಳುವ ಗುಲಾಬಿ
ಇರುವುದಿಲ್ಲವೆ ಮುಳ್ಳುಗಳ ನಡುವೆ, ಕರೆ–
ವುದಿಲ್ಲವೆ ಬಾತು ತನ್ನಿನಿಯನ ಕೆಸರ
ಹೊಂಡದಲ್ಲಿ ಕೂಡಲು, ಹುಟ್ಟುವುದಿಲ್ಲವೆ ಮತ್ಸರ ಪ್ರೀತಿ ಮುತಿಷ್ಟದಲ್ಲೆ

ಬಣ್ಣಗಳೆಲ್ಲ ಅಡಗಿಲ್ಲವೆ ಕಪ್ಪಿನಲ್ಲೆ,
ಚಿಪ್ಪು ಒಡೆದರೆ, ಆಹಾ, ಹೊಳೆವುದಿಲ್ಲವೆ ಮುತ್ತು
ಹೊತ್ತಿಲ್ಲದೆ ಹಪಹಪಿಸುವ ಸಂಗಸುಖ ಇಲ್ಲವೆ ಮುಚ್ಚಿ–
ಕೊಳ್ಳುವ ತೊಡೆ ನಡು ಮೂಲದಲ್ಲೆ

ಇರುತ್ತದೆ ಬರಹದಲ್ಲಿ ಬಹಳ ಕೆಡಕು
ಚಲೋ ಇರುವುದ ಇನ್ನೊಮ್ಮೆ ಹುಡುಕು.

— ಎಲ್. ಎನ್. ಮುಕುಂದರಾಜ್

# ಈಗ ಕಂಡ ಪುಸ್ತಕಗಳು

ಮಹಾಯಾತ್ರೆ (ನಾಟಕ) : ಜಯಪ್ರಕಾಶ ಮಾವಿನಕುಳಿ, ಸ್ಫಟಿಕ ಪ್ರಕಾಶನ, ಕೋಡಂಗಲ್ಲು, ಮೂಡಬಿದಿರೆ–574197, ಬೆಲೆ : 20 ರೂ. ಇದು ಮಾವಿನಕುಳಿ ಯವರ ನಾಲ್ಕನೆಯ ನಾಟಕ, ಕಥೆಗಳಲ್ಲಿಯ ಹಿಡಿತ ಇಲ್ಲಿಲ್ಲ. ರಾಜಕಾರಣ ಮತ್ತು ಧರ್ಮದ ನಡುವಿನ ವೈಪರೀತ್ಯಗಳನ್ನು ಹಿಡಿದಿಡಲು ಪ್ರಯತ್ನಿಸಿದ್ದಾರೆ. ತಕ್ಕಮಟ್ಟಿಗಿರುವ ನಾಟಕ.

ಚಿಂತನ ಚಿಲುಮೆ (ವೈಚಾರಿಕ ಲೇಖನಗಳು) : ಚಿ. ಸೋಮಶೇಖರ, ಅನನ್ಯ ಪ್ರಕಾಶನ, ಶ್ರೀದೇವಿನಗರ, ವಿದ್ಯಾಗಿರಿ, ಧಾರವಾಡ-4. ಬೆಲೆ ; 15 ರೂ. ಇದು ಎರಡನೆಯ ಮುದ್ರಣವನ್ನು ಕಂಡಿದೆ. ಬೆಂಗಳೂರು ಜಿಲ್ಲೆಯ ವಿಶೇಷ ಜಿಲ್ಲಾಧಿಕಾರಿಯಾಗಿರುವ ಸೋಮಶೇಖರ್‌ರವರು ಕ್ರಿಯಾಶೀಲ ಅಧಿಕಾರಿ, ಅದರ ಜೊತೆಗೆಯೇ ಸಾಂಸ್ಕೃತಿಕವಾಗಿ ಆರೋಗ್ಯಪೂರ್ಣ ಮನಸ್ಸು. ಕನ್ನಡ ಆಡಳಿತ ಭಾಷೆಯಾಗುವ ಬಗ್ಗೆ ಗಾಢವಾದ ಒಲವು ಬೆಳೆಸಿಕೊಂಡವರು. ಇಲ್ಲಿ ನಾನಾ ವಿಷಯಗಳಿಗೆ ಸಂಬಂಧಿಸಿದ ಲೇಖನಗಳಿವೆ. ಒಮ್ಮೆ ಓದಬಹುದಾದ ಪುಸ್ತಕ.

ಕಾಣುತಿಹುದೀಗಷ್ಟೇ (ಕವನ ಸಂಕಲನ) : ಬಿ.ಎಸ್. ಚಂದ್ರಶೇಖರ, ಕನ್ನಡ ಸಂಘ, ಭಾರತೀಯ ಸ್ಟೇಟ್ ಬ್ಯಾಂಕ್, ಜೆ.ಸಿ. ರಸ್ತೆ, ಬೆಂಗಳೂರು–2. ಬೆಲೆ : 16 ರೂ. ಇದು ಚಂದ್ರಶೇಖರ ಅವರ ಎರಡನೆಯ ಸಂಕಲನ. ಉತ್ಸಾಹಿ ಬ್ಯಾಂಕ್ ಅಧಿಕಾರಿ ಸಾಹಿತ್ಯದ ಬಗ್ಗೆಯೂ ಇದೇ ಉತ್ಸಾಹ. ಕವನ ಬರೆಯುವೆಯಾ ಕಂಪ್ಯೂಟರ್. ಸಂಕಲನಕ್ಕಿಂತ ಇಲ್ಲಿ ಓದಬಹುದಾದ ಕವನಗಳಿವೆ.

ಬುಗ್ಗೆ (ಹನಿಗವನಗಳು) : ಜರಗನಹಳ್ಳಿ ಶಿವಶಂಕರ್, ಶುಭದ ಪ್ರಕಾಶನ, ಜರಗನಹಳ್ಳಿ, ಜೆ.ಪಿ. ನಗರ ಅಂಚೆ, ಬೆಂಗಳೂರು-78, ಬೆಲೆ : 12 ರೂ. ಇತ್ತೀಚೆಗೆ ತುಂಬ ಚುರುಕಿನಿಂದ ಹನಿಗವನಗಳನ್ನು ಬರೆಯುವ ಶಿವಶಂಕರ್‌ರವರು ಕಾವ್ಯದಲ್ಲಿ ಹೊಸತನಕ್ಕಾಗಿ ಹುಡುಕುತ್ತಿರುವರು. ಇಲ್ಲಿ ಜಿ. ರಾಜಶೇಖರ್‌ರವರ ಮೌಲಿಕವಾದ ಮುನ್ನುಡಿ ಇದೆ.

ದಾರಿ ಮತ್ತು ಆಕಾಶ (ಕವನ ಸಂಕಲನ) ಸ. ರಘುನಾಥ, ಶುಭದ ಪ್ರಕಾಶನ, ಬೆಂಗಳೂರು-78, ಬೆಲೆ : 10 ರೂ. ರಘುನಾಥ ಅವರಿಗೆ ಕಾವ್ಯವೆಂದರೆ ಜೀವನ· ಆದ್ದರಿಂದಲೇ ಇಲ್ಲಿಯ ಕವನಗಳನ್ನು ಓದಬೇಕೆನಿಸುತ್ತದೆ,

ದಾರಿ (ಕಾದಂಬರಿ) : ಆರ್.ಡಿ. ಹೆಗಡೆ, ಆಲ್ಮನೆ ಪ್ರಕಾಶನ, ಕಾನಗೋಡು-581340, ಸಿರ್ಸಿ, ಉ.ಕ. ಬೆಲೆ : 13 ರೂ. ಹೆಗಡೆಯವರು ಈಗಾಗಲೇ ತಮ್ಮ ಗಂಭೀರವಾದ ಬರವಣಿಗೆಯಿಂದ ಕನ್ನಡದ ಓದುಗರಿಗೆ ಪರಿಚಯವಾಗಿದ್ದಾರೆ. 'ದಾರಿ' ಕಾದಂಬರಿ ಮಹತ್ವಪೂರ್ಣವಾದ ಕೃತಿಯಲ್ಲದಿದ್ದರೂ ; ಓದಬೇಕೆನಿಸುತ್ತದೆ.

ಅತ್ತುಬಿಡೇ ಗೆಳತಿ (ಕವನ ಸಂಕಲನ): ಪ್ರತಿಭಾ ಯುವ ವೇದಿಕೆ, ನಂ. 3399, 5ನೇ ಅಡ್ಡರಸ್ತೆ, ಗಾಯಿತ್ರಿನಗರ, ಬೆಂಗಳೂರು-21. ಬೆಲೆ: 10 ರೂ. ಸಾಹಿತ್ಯ ಚಟುವಟಿಕೆಗಳ ಬಗ್ಗೆ ಲವಲವಿಕೆಯಿಂದ ಕೆಲಸ ಮಾಡುತ್ತಿರುವ ಸಂಘಟನೆ. ಈ ಸಂಘಟನೆಯು ಮೂಲಕ ಈಗಾಗಲೇ ಕೆಲವು ಪುಟ್ಟಪುಟ್ಟ ಕೃತಿಗಳನ್ನು ತಂದಿದ್ದಾರೆ, ಅವೆಲ್ಲವುಗಳಿಗಿಂತ ಇದು ಚೆನ್ನಾಗಿದೆ. ಇಲ್ಲಿ ಸಿ.ಎಸ್. ಸವಿತಾ, ಭಗವತಿ ಎಂ.ಆರ್, ಹಾಗೂ ಸುಧಾಶರ್ಮ ಚವತ್ತಿ ಅವರ ಕವನಗಳಿವೆ. ಆರಾಮವಾಗಿ ಓದಬಹುದು.

ಸಾಹಿತ್ಯ ಸಂಘರ್ಷ (ಸಾಹಿತ್ಯಕ ತ್ರೈಮಾಸಿಕ): ನಂ. 131, ವಿಜಯಾ ಬಿಲ್ಡಿಂಗ್, ದೊಮ್ಮಲೂರು, ಬೆಂಗಳೂರು-71, ವಾರ್ಷಿಕ ಚಂದಾ: 20 ರೂ. ಎಡಪಂಥೀಯ ಧೋರಣೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಬರುತ್ತಿರುವ ಪತ್ರಿಕೆ. ಆರೋಗ್ಯಪೂರ್ಣ ಆಶಯಗಳನ್ನು ತುಂಬಿಕೊಂಡಿರುವಂಥವರ ಪತ್ರಿಕೆ.

ಹುಲಿ ಮಾಡಿಸಿದ ಮದುವೆ ಮತ್ತು ಇತರೆ ಲೇಖನಗಳು: ಬಿಳುಮನೆ ರಾಮದಾಸ್, ಮಲೆನಾಡು ಪ್ರಕಾಶನ, ನಂ. 12, 35ನೇ 'ಬಿ' ಅಡ್ಡರಸ್ತೆ, 11ನೇ ಮುಖ್ಯರಸ್ತೆ, 4ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು-41, ಬೆಲೆ: 18 ರೂ. ಬಿಳುಮನೆ ರಾಮದಾಸ್‌ರವರು ತಮ್ಮ 'ವ್ಯಾಮೋಹ' ಕಾದಂಬರಿಯ ನಂತರ ತಂದಿರುವ ಉತ್ತಮ ಪುಸ್ತಕ. ಸ್ವಾರಸ್ಯವಾಗಿ ಓದಬಹುದಾದಂಥದ್ದು.

ಹಿಡಿಶಾಪ (ಕವನ ಸಂಕಲನ): ಐ.ಆರ್. ಪೆರುಮಾಳ್, ಕನ್ನಡಕ್ಕೆ ವೀಚಿ, ಚಲನ ಸಹಕಾರಿ ಪ್ರಕಾಶನ, ತುಮಕೂರು-6, ಬೆಲೆ: 25 ರೂ. 'ಹಸಿವಿನ ಲೋಕ'ದ ನಂತರ ಬಂದಿರುವ ಸಂಕಲನ, ಪೆರುಮಾಳ್‌ರವರು ಉತ್ಸಾಹಿ ಐ.ಎ.ಎಸ್. ಅಧಿಕಾರಿ, ಆದರೆ ಗಟ್ಟಿಯಾದ ಕವನಗಳಲ್ಲ. ಪೆರುಮಾಳ್‌ರವರು ತಾಳ್ಮೆಯಿಂದ ಬರೆಯುವುದನ್ನು ಕಲಿಯಬೇಕು.

ಅಭಿನಯದ ಬಯಲು (ಕವನ ಸಂಕಲನ): ವೀಚಿ, ಚಲನ ಸಹಕಾರಿ ಪ್ರಕಾಶನ, ತುಮಕೂರು-6, ಬೆಲೆ: 25 ರೂ. ವೀಚಿಯವರು ಕನ್ನಡ ಕಾವ್ಯ ಸಂದರ್ಭಕ್ಕೆ ಹೊಸಬರೇನೂ ಅಲ್ಲ. ಇಲ್ಲಿ ನಾನಾ ರೀತಿಯ ಪ್ರಯೋಗ ಮಾಡಿರುವ ಕವಿ. ಗಂಭೀರವಾಗಿ ಚಿಂತಿಸುವ, ಬರೆಯುವ ವೀಚಿಯವರ ಈ ಸಂಕಲನವನ್ನು ನಾವು ಓದಿ ಚರ್ಚಿಸಬೇಕಾಗಿದೆ.

ಬಕುಲದ ಹೂವುಗಳು (ಕವನ ಸಂಕಲನ): ಸು.ರಂ. ಎಕ್ಕುಂಡಿ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ಬೆಲೆ: 30 ರೂ. ಎಕ್ಕುಂಡಿಯವರು ಕನ್ನಡ ಕಾವ್ಯ ಸಂದರ್ಭದ ಮುಖ್ಯ ಕವಿಗಳಲ್ಲಿ ಒಬ್ಬರು. ಇದು ನಮ್ಮಲ್ಲಿರಬೇಕಾದ ಪುಸ್ತಕ, ಇಷ್ಟಾದರೂ ಎಕ್ಕುಂಡಿಯವರು ನಾಲ್ಕು ಮಾತುಗಳಲ್ಲಿ ಹೇಳುವುದನ್ನು ಹತ್ತು ಮಾತುಗಳಲ್ಲಿ ಹೇಳಲು ಹೊರಡುತ್ತಾರೆ. ಅದು ಅವರ ದೌರ್ಬಲ್ಯವೂ ಇರಬಹುದು.

**ನಮ್ಮೊಳಗೊಬ್ಬ ನಾಜೂಕಯ್ಯ** (ನಾಟಕ): ಟಿ. ಎನ್. ಸೀತಾರಾಮ್, ಕ್ರೈಸ್ಟ್ ಕಾಲೇಜ್ ಪ್ರಕಟಣೆ, ಬೆಲೆ: 25 ರೂ. ಸೀತಾರಾಮ್‌ರವರು ನಟರಾಗಿ ಈಗಾಗಲೇ ನಮಗೆ ಪರಿಚಯವಾಗಿದ್ದಾರೆ. ವಿಷಾದ ಮತ್ತು ವಿಡಂಬನೆಯನ್ನು ಗಾಢವಾಗಿ ಅಭಿವ್ಯಕ್ತಿಸುವ ನಾಟಕವಿದು. ಮಹತ್ವಪೂರ್ಣ ನಾಟಕವೂ ಹೌದು. ಚರ್ಚೆಯಾಗಬೇಕಾದ ನಾಟಕ.

**ಗೌರಿ** (ಕಾದಂಬರಿ): ಕೆ. ಸತ್ಯನಾರಾಯಣ, ಅಪರ್ಣ ಪ್ರಕಾಶನ, 43/48, 7ನೇ ಕ್ರಾಸ್, ವಸಂತನಗರ, ಬೆಂಗಳೂರು-560 052, ಬೆಲೆ: 35 ರೂ.

ಇದು ಸತ್ಯನಾರಾಯಣ ಅವರ ಹೊಸ ಕಾದಂಬರಿ. ಹಿಂದಿನ ಎರಡು ಕಾದಂಬರಿಗಳ ರೀತಿಯಲ್ಲಿ ಇಲ್ಲಿಯೂ ಪ್ರಯೋಗ ನಡೆಸಲು ಹೋಗಿದ್ದಾರೆ. ಮನೆ ಮನೆಯಲ್ಲಿ ಮುಸುರೆ ತಿಕ್ಕುವ ಗೌರಿಯ ಮೂಲಕ ಜೀವನವನ್ನು ನೋಡಲು ಹೋಗಿದ್ದಾರೆ. ತಮ್ಮ ಅತೀವ ಬುದ್ಧಿಶಕ್ತಿಯನ್ನು ಅವಳ ಮೇಲೆ ಪ್ರದರ್ಶಿಸುವುದರಿಂದ ಒಟ್ಟು ಬರವಣಿಗೆ ಸಿಕ್ಕಾಗಿ ಕಾಣುತ್ತದೆ. ಉತ್ತಮ ಕಾದಂಬರಿಯಾಗುವುದನ್ನು ತಪ್ಪಿಸಿದ್ದಾರೆ.

**ದೃಷ್ಟಿ ಮತ್ತು ಸಮಷ್ಟಿ**: ಡಾ॥ ಕರೀಗೌಡ ಬೀಚನಹಳ್ಳಿ, ಅಜಂತ ಪ್ರಕಾಶನ, 31, 80 ಅಡಿ ರಸ್ತೆ, ಕೆಂಗೇರಿ ಉಪನಗರ, ಬೆಂಗಳೂರು-560 060, ಬೆಲೆ: 65 ರೂ.

ಇದು ಕರೀಗೌಡ ಬೀಚನಹಳ್ಳಿಯವರ ಪಿ.ಎಚ್.ಡಿ. ಪ್ರಬಂಧ. 'ಕನ್ನಡ ನವ್ಯಕಥೆಗಳ ಅಧ್ಯಯನ' ಈ ವಿಷಯವನ್ನು ಕುರಿತು ಚರ್ಚಿಸಿದ್ದಾರೆ. ಕರೀಗೌಡ ಅವರು ಇತ್ತೀಚಿನ ಉತ್ತಮ ಕಥೆಗಾರರಾಗಿರುವುದರಿಂದ ಈ ಅಧ್ಯಯನಕ್ಕೆ ಒಂದು ವಿಶೇಷತೆ ಇದೆ.

— ಸಿದ್ಧಾರ್ಥ

# ಕರ್ನಾಟಕ ನಾಟಕ ಅಕಾಡೆಮಿ ಪ್ರಕಟಣೆ

ಕರ್ನಾಟಕ ನಾಟಕ ಅಕಾಡೆಮಿಯ ಪರವಾಗಿ ಈ ಕೆಳಕಂಡ ಮುಖ್ಯ ಯೋಜನೆಗಳನ್ನು ತಮ್ಮ ಮುಂದೆ ಪ್ರಕಟಿಸಲು ಬಹಳ ಸಂತೋಷಿಸುತ್ತೇವೆ.

**ರಂಗವಸಂತ : (20 ಜಿಲ್ಲೆಯಲ್ಲಿ 25 ನಾಟಕಗಳ ಉತ್ಸವ)**

ರಂಗಭೂಮಿ ಇಂದು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದೆ. ಹವ್ಯಾಸಿ ಮತ್ತು ವೃತ್ತಿರಂಗಭೂಮಿ ಎರಡೂ ಸಹ.

ಹಲವಾರು ಕಾರಣಗಳಿಂದ ಪ್ರೇಕ್ಷಕರು ದಿನೇ ದಿನೇ ಕಮ್ಮಿಯಾಗುತ್ತಿರುವ ಕಾರಣದಿಂದ ಹವ್ಯಾಸಿ ರಂಗಭೂಮಿ ತನ್ನ ಪ್ರಯೋಗಶೀಲತೆಯನ್ನು ಕಳೆದುಕೊಳ್ಳುತ್ತಿದೆ.

ಲೈಸೆನ್ಸ್‌ನ ಕಾಟ ಮತ್ತು ಆರ್ಥಿಕ ಮುಗ್ಗಟ್ಟಿನಿಂದ ವೃತ್ತಿರಂಗಭೂಮಿ ತತ್ತರಿಸುತ್ತಿದೆ.

ಇವೆಲ್ಲವನ್ನೂ ಗಮನಿಸಿ, ಕಲಾ ತಂಡಗಳನ್ನು ಪ್ರೋತ್ಸಾಹಿಸಲು- ರಂಗಭೂಮಿಯ ಸಮಸ್ಯೆಗಳನ್ನು ಜನರ ಗಮನಕ್ಕೆ ತರಲು ಮೇ 21ರಂದು ಇದೇ ರಾಜ್ಯದ ಇಪ್ಪತ್ತೂ ಜಿಲ್ಲೆಗಳಲ್ಲೂ ಪ್ರತಿಭಾನ್ವಿತ ಯುವ ನಿರ್ದೇಶಕರಿಂದ ಹೊಸ ನಾಟಕ ಪ್ರದರ್ಶನ, ನಾಲ್ಕು ಕೇಂದ್ರಗಳಲ್ಲಿ ವೃತ್ತಿ ಕಂಪನಿ ನಾಟಕ ಪ್ರದರ್ಶನ ಮತ್ತು ಒಂದು ಕೇಂದ್ರದಲ್ಲಿ ಜಾನಪದ ನಾಟಕ ಪ್ರದರ್ಶನ, ಅಂದರೆ, ಒಟ್ಟು 25 ಪ್ರದರ್ಶನಗಳನ್ನು ಒಂದೇ ಸಂಜೆ ಏಕಕಾಲದಲ್ಲಿ ಪ್ರದರ್ಶಿಸಲು ಯೋಜಿಸಲಾಗಿದೆ.

1) ಪ್ರತಿ ಜಿಲ್ಲೆಯಲ್ಲೂ ಇರುವ ಕನ್ನಡ-ಸಂಸ್ಕೃತಿ, ವಾರ್ತಾ ಮತ್ತು ಪ್ರಚಾರ ಹಾಗೂ ಯುವಜನ ಸೇವಾ ಇಲಾಖೆಗಳ ಸಹಾಯಕ ನಿರ್ದೇಶಕರು ಮತ್ತು ಅಧಿಕಾರೇತರ ಇಬ್ಬರು ಕಲಾವಿದರನ್ನು ಒಳಗೊಂಡಂತೆ ಜಿಲ್ಲಾ ಸಮಿತಿಗಳನ್ನು ರಚಿಸಲು ಉದ್ದೇಶಿಸಲಾಗಿದೆ.

2) ಈ 20 ಜಿಲ್ಲೆ ತಂಡಗಳು ತಮ್ಮ ಡಿವಿಜನಲ್ ಮಟ್ಟದಲ್ಲಿ (ಬೆಂಗಳೂರು, ಬೆಳಗಾಂವ, ಗುಲ್ಬರ್ಗಾ ಮತ್ತು ಮೈಸೂರು) ಮತ್ತೆ ಸ್ಪರ್ಧಿಸುವವು.

3) ಡಿವಿಜನಲ್ ಸ್ಪರ್ಧೆಯಲ್ಲಿ ಆಯ್ಕೆಯಾಗಿರುವ ನಾಲ್ಕು ತಂಡಗಳನ್ನು ರಾಜ್ಯಮಟ್ಟದ ಉತ್ಸವಕ್ಕೆ ಬೆಂಗಳೂರಿಗೆ ಆಹ್ವಾನಿಸಲಾಗುವುದು.

4) ರಾಜ್ಯಮಟ್ಟದ ಉತ್ಸವದಲ್ಲಿ ಪ್ರದರ್ಶನವಾಗುವ ತಂಡಗಳನ್ನು ಅಕಾಡೆಮಿ ಯೋಜಿಸುವ, ಸಾದರಪಡಿಸುವ ಉತ್ಸವಗಳಲ್ಲಿ ಉಪಯೋಗಿಸಲಾಗುವುದು.

5) ಪ್ರತಿ ಜಿಲ್ಲೆಯಲ್ಲಿ ಅಕಾಡೆಮಿ ಆಯ್ಕೆ ಮಾಡುವ ನಿರ್ದೇಶಕರಿಗೆ ಪ್ರದರ್ಶನ ಸಿದ್ಧಪಡಿಸಲು ರೂ. 5,000-00 ನೀಡಲಾಗುವುದು.

6) ಡಿವಿಜನಲ್ ಸ್ಪರ್ಧೆಗೆ ಭಾಗವಹಿಸಲು ಹೋಗಿ ಬರುವ ವೆಚ್ಚವಾಗಿ ರೂ. 1,500-00 ನೀಡಲಾಗುವುದು. ಮತ್ತು ಪ್ರತಿ ಕೇಂದ್ರಕ್ಕೆ ವ್ಯವಸ್ಥಾ ವೆಚ್ಚವಾಗಿ ರೂ. 10,000-00 ಬಿಡುಗಡೆ ಮಾಡಲಾಗುವುದು.

ಜಿ. ಶ್ರೀನಿವಾಸ್ (ಕಪ್ಪಣ್ಣ)
ರಿಜಿಸ್ಟ್ರಾರ್

ಪದ್ಮಶ್ರೀ ಚಿಂದೋಡಿ ಲೀಲಾ
ಅಧ್ಯಕ್ಷರು

FNP/KRNU/72 No. M (2) PRB 211/73/74

SHOODRA Kannada Monthly

# ಶೂದ್ರ

1992ರ ಏಪ್ರಿಲ್ ಸಂಚಿಕೆಯಲ್ಲಿ:

ಕೆ. ವಿ. ಸುಬ್ಬಣ್ಣ – ಕೆ. ಎಸ್. ಶ್ರೀನಿವಾಸಮೂರ್ತಿ – ಚಂದ್ರಶೇಖರ ನಂಗಲಿ ಹಮೀದ್ ಮಂಜೇಶ್ವರ್ – ಸ್ವಾಮಿನಾಥ–ಬಿ. ಚಿನ್ನಸ್ವಾಮಿ–ದೊಡ್ಡರಂಗೇಗೌಡ ನಿರ್ಮಲ ವರ್ಮ – ರಾಮಚಂದ್ರ ಶರ್ಮ – ವೀಣಾ ಬನ್ನಂಜೆ – ತಿರುಗಾಟದ ನಾಟಕಗಳು – ಪುಸ್ತಕ ವಿಮರ್ಶೆ – ಕನಸಿಗೊಂದು ಕಣ್ಣು ಇತ್ಯಾದಿ.

M. Sriniv[illegible] Editor for Shoodra, Printed at :
Pallavi Printers, No. 1, 3rd Cross, Balaji Nagar,
Suddagunte Palya, D.R. College Post, Bangalore-29